ಜನಪ್ರಿಯ ಗ್ರಂಥಮಾಲೆ
೨೯೯

# ಮೈಲಾರ ಬಸವಲಿಂಗ ಶರಣರು

ದೇವೇಂದ್ರಕುಮಾರ ಹಕಾರಿ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಪ್ರಿಲ್, ೧೯೭೯

ಉಪನ್ಯಾಸ ಗ್ರಂಥಮಾಲೆ

೨೯೯

# ಮೈಲಾರ ಬಸವಲಿಂಗ ಶರಣರು

ದೇವೇಂದ್ರಕುಮಾರ ಹಕಾರಿ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಏಪ್ರಿಲ್, ೧೯೭೯

ಪ್ರಕಾಶಕರು :

**ಸಿ. ಎಸ್. ಕಣವಿ**

ನಿರ್ದೇಶಕರು,
ವ್ಯಾಸಂಗವಿಸ್ತರಣ–ಪ್ರಕಟನ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ಎಪ್ರಿಲ್, ೧೯೭೯



ಬೆಲೆ : ೫೦ ಪೈಸೆ

ಮುದ್ರಕರು :

**ಜಿ. ಬಿ. ಮನ್ನಾಚಾರ**

ಸಹಾಯಕ ನಿರ್ದೇಶಕರು,
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ-೫೮೦೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥ ಮಾಲೆ' ಅತ್ಯಂತ ಮುಖ್ಯವೂ ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ, ವಿಶ್ವವಿದ್ಯಾಲಯ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೯೮ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಎಸ್. ಎಸ್. ಒಡೆಯರ**
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗವು ಬಳ್ಳಾರಿ ಜಿಲ್ಲೆಯ ನಾಣ್ಯಾಪುರದಲ್ಲಿ ದಿ. ೧೨ ಮತ್ತು ೧೩ ಮಾರ್ಚ ೧೯೭೭ರ ರಂದು ೨೫೫ನೇ ಉಪನ್ಯಾಸ ಶಿಬಿರದ ಏರ್ಪಾಟು ಮಾಡಿತ್ತು. ಅಲ್ಲಿ ನಾನು ಮಾಡಿದ ಭಾಷಣದ ರೂಪವೇ ಈ ಕಿರುಪುಸ್ತಿಕೆ.

ಶ್ರೀ ಮುರುಘಾಮಠದ ಬಾಲಲೀಲಾ ಮಹಂತ ಶಿವ ಯೋಗೀಶ್ವರ ಗ್ರಂಥಮಾಲೆಯ 'ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು' ಗ್ರಂಥವನ್ನು ಲಿಂ. ಪ್ರೊ. ಶಿ. ಶಿ. ಬಸವನಾಳ ಸಂಪಾದಿಸಿದ್ದರು. ಅದೇ ಹೊತ್ತಿಗೆಯಲ್ಲಿ ಬಸವಲಿಂಗ ಶರಣರ ಜೀವನಕ್ಕೆ ಸಂಬಂಧಿಸಿದ ಕೆಲವು ವಿವರಗಳನ್ನು ಕೊಟ್ಟಿದ್ದಾರೆ.

ನಮ್ಮ ಹಳ್ಳಿ–ಚಿಕ್ಕೇನಕೊಪ್ಪದ ಶಂಭುಲಿಂಗಾಶ್ರಮದ ಲಿಂ. ಶಿದ್ಧಲಿಂಗಸ್ವಾಮಿಗಳು ಮೈಲಾರ ಶರಣರ ಜೀವನದ ಒಂದೆರಡು ಸಂಗತಿ ಹೇಳುತ್ತಿದ್ದರು.

ಈ ಎಲ್ಲ ವಿಷಯಗಳನ್ನು ನೋಡಿದಾಗ ಬಸವಲಿಂಗ ಶರಣರ ಬದುಕಿನ ವಿವರಗಳು ಅಪೂರ್ಣ ಅನ್ನಿಸಿತು.

ಮೈಲಾರ ಕ್ಷೇತ್ರಕ್ಕೆ ಪ್ರತಿವರ್ಷ ಹೋಗುವ ಪರಿಪಾಠ ಇಟ್ಟುಕೊಂಡಿರುವ ನನಗೆ, ಅಲ್ಲಿಯೇ ಏನಾದರೂ ಮತ್ತೆ ಕಲವು ವಿಷಯ ದೊರೆಯುವ ಆಸೆಯಿತ್ತು. ಅಲ್ಲೂ ನಿರಾಸೆಯೇ. ಬಸವಲಿಂಗ ಶರಣರದೆಂದು ಹೇಳುವ ಒಂದು ಮನೆ, ಧಾರವಾಡ ಮುರುಘಾಮಠದ ಶ್ರೀ ಮೃತ್ಯುಂಜಯ ಅಪ್ಪಗಳು ಮತ್ತು

ಶ್ರೀ ಮಹಾಂತಪ್ಪಗಳು ಆ ಕ್ಷೇತ್ರಕ್ಕೆ ಭೆಟ್ಟಿ ನೀಡಿ ಅಲ್ಲಿ ಉಳಿಸಿರುವ ಬಸವಲಿಂಗ ಶರಣರ ಸ್ಮಾರಕ ಇಷ್ಟು ಬಿಟ್ಟರೆ ಮತ್ತೇನೂ ದೊರೆಯುವುದಿಲ್ಲ.

ಆದರೆ–ಬಾಲ್ಯದಲ್ಲಿಯೇ ನನಗೆ ಸಾಹಿತ್ಯ ಪ್ರೇರಣೆಯಿತ್ತ, ಸ್ವಾತಂತ್ರ್ಯಯೋಧರೂ, ನಾಡಿನ ಗಣ್ಯ ವ್ಯಕ್ತಿಗಳೂ, ಸ್ವತಃ ಸಾಹಿತಿಗಳೂ ಆದ ಬಾಚಿಗೊಂಡನಹಳ್ಳಿಯ ಶ್ರೀ ಕೆ. ಚೆನ್ನಬಸವನ ಗೌಡರು ನಾನು ಅವರಲ್ಲಿಗೆ ಹೋದಾಗ ಮೈಲಾರ ಬಸವಲಿಂಗ ಶರಣರ ವಿಷಯವಾಗಿ ಕೆಲವು ಮಹತ್ವದ ಘಟನೆಗಳನ್ನು ತಿಳಿಸಿ ದರು.

ಈ ಎಲ್ಲ ವಿಷಯ ವಿವರಗಳನ್ನು ಬಸವಲಿಂಗ ಶರಣರ ಲೌಕಿಕ ಜೀವನ ನಿರೂಪಣೆಗೆ ಬಳಸಿಕೊಂಡಿದ್ದೇನೆ.

ಬಸವಲಿಂಗ ಶರಣರನ್ನು ಕುರಿತು ಉಪನ್ಯಾಸ ಮಾಡಲು ಸದವಕಾಶವನ್ನು ಒದಗಿಸಿಕೊಟ್ಟ ವ್ಯಾಸಂಗವಿಸ್ತರಣ ಮತ್ತು ಪ್ರಕಟನ ವಿಭಾಗದ ನಿರ್ದೇಶಕ ಶ್ರೀ ಚೆನ್ನವೀರ ಕಣವಿ ಅವರಿಗೂ ಈ ವಿಭಾಗದ ಶ್ರೀ ಎಸ್.ಬಿ. ನಾಯಕ, ಶ್ರೀ ಗುಡ್ಡಿನ ಅವರಿಗೂ ನಾನು ಋಣಿ.

ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೨೯–೪–೧೯೭೪

**ದೇವೇಂದ್ರಕುಮಾರ ಹಕಾರಿ**

# ಪರಿವಿಡಿ

# ೧. ಪೀಠಿಕೆ

ವಸ್ತು. ಶೈಲಿ ಮತ್ತು ಭಾಷೆಗಳ ದೃಷ್ಟಿಯಿಂದ ಒಂದು ಅಪೂರ್ವ ರಚನಾಯುಗವಾದ ವಚನ ಸಾಹಿತ್ಯ. ಕನ್ನಡ ಸಾಹಿತ್ಯದ ಮಹತ್ತರವಾದ ದ್ವಿತೀಯ ಘಟ್ಟ. ವೀರಶೈವ ಧರ್ಮತತ್ತ್ವಗಳ ಸಾರ ಸರ್ವಸ್ವವು ಈ ಯುಗದ ರಚನೆಗಳಲ್ಲಿ ಹೊಮ್ಮಿ ಸಮಾಜದ ಎಲ್ಲ ಸ್ತರಗಳ ಜನತೆಗೂ ಅದು ಹತ್ತಿರವಾಯಿತು; ಜನತೆಯ ಸೊತ್ತಾಯಿತು. ಧರ್ಮದ ಹಂಬಲು ಸ್ವಾನುಭಾವದ ನೆಲೆಗಟ್ಟಿನಿಂದ ಸ್ಪಂದಿಸಿ, ಜೀವನ ಮೌಲ್ಯಗಳ ಸತ್ಯಾನ್ವೇಷಣೆಗೆ ಪ್ರೇರಕವಾಗಿ ನಿಂತ ವಚನಗಳು. ಕನ್ನಡ ಸಾಹಿತ್ಯದ ಸ್ವರೂಪವನ್ನು ಪರಿವರ್ತನೆಗೊಳಿಸಿದುವು; ಕನ್ನಡ ಜನಾಂಗದ ನೂತನಪ್ರಜ್ಞೆಯ ಅಭಿವ್ಯಕ್ತಿಗೆ ಹೊಸ ದಿಕ್ಕು ತೋರಿದುವು. ಈ ಸಾಹಿತ್ಯಯುಗದ ಕಾಲದಲ್ಲಿಯೇ ಜೊತೆ ಜೊತೆಗೆ ಬೆಳೆದು ಬಂದ ಹಾಡುಗಬ್ಬದ ಪರಂಪರೆ ಕನ್ನಡದ ಅನುಭಾವ ಸಾಹಿತ್ಯಕ್ಕೆ ಒಂದು ನಾದರಸತರಂಗವನ್ನು ಒಡವೆರೆಸಿತು. ವಚನಗಳಿಂದ ಕನ್ನಡ 'ದೇಸಿ' ಕಣ್ದೆರೆದರೆ, ಅದರ ಮೂಲಕ 'ಅನುಭಾವ' ಅರಳಿ ಪರಿಮಳಿಸಿತು. ಕನ್ನಡ ನುಡಿಯ ಸೊಗಡನ್ನು. ಆತ್ಮಜ್ಞಾನವನ್ನು. ಅಧ್ಯಾತ್ಮವನ್ನು ಅಚ್ಚಗನ್ನಡದಲ್ಲಿ ಒಡಮೂಡಿಸುವ ಒಡನುಡಿಯುವ ಸಹಜ ಲವಲವಿಕೆ ಉತ್ಸಾಹ. ವಚನಗಳ ಮತ್ತು ಹಾಡುಗಬ್ಬಗಳ ಮುಖಾಂತರ ಸಾರ್ಥಕ ಸ್ವರೂಪ ಪಡೆಯಿತು.

ವಚನಗಳ ಜೊತೆಗೆ ಷಟ್ಪದಿ, ಚೌಪದಿ, ಸಾಂಗತ್ಯ, ಕಾವ್ಯಗಳು ರೂಪುಗೊಂಡರೆ, ತ್ರಿಪದಿ, ದ್ವಿಪದಿ ಮುಂತಾದ ಜಾನಪದ ಲಯಧಾಟಿಗಳನ್ನು ಬಳಸಿಕೊಂಡು ಹಾಡುಗಬ್ಬಗಳು ರಚಿತ ವಾದುವು.

ಸಾಹಿತ್ಯ ಶಿಷ್ಟರೂಪಕ್ಕೆ ಒಳಪಡುವುದಕ್ಕಿಂತ ಎಷ್ಟೋ ಕಾಲ ಮೊದಲೇ ರೂಢಿಯಲ್ಲಿ ಧುಮ್ಮಿಕ್ಕಿದ ಜನಪದ ಸಾಹಿತ್ಯದ ವಿವಿಧ ರಚನೆ ರೂಪಗಳು ಹಾಡುಗಬ್ಬಕ್ಕೆ ತಾಯಿ ಬೇರು. ಜನಪದ ಹಾಡುಗಳ ಗೇಯರೂಪವನ್ನು ಮೆಚ್ಚಿ ಅದನ್ನು ಆತ್ಮ ಗತ ಮಾಡಿಕೊಂಡ ಅನೇಕ ಶಿವಶರಣರು ವಚನಗಳ ಜೊತೆಗೆ ಅನುಭಾವದ ಹಾಡುಗಳನ್ನು ರಚಿಸಿದರು. ಅಕ್ಕಮಹಾ ದೇವಿಯ 'ಯೋಗಾಂಗ ತ್ರಿವಿಧಿ', ಸಿದ್ಧರಾಮನ ಬಸವ ತ್ರಿವಿಧಿ, ಅಲ್ಲಮಪ್ರಭು ಮೊದಲಾದವರ ಕೆಲವು ರಚನೆಗಳು ಈ ಮಾತಿಗೆ ನಿದರ್ಶನಗಳಾಗಿವೆ. ಅದರಲ್ಲಿ ಕೆಲವರು ಹಾಡುಗಬ್ಬಗಳ ಮೂಲಕವೇ ತಮ್ಮ 'ಅನುಭಾವ'ವನ್ನು ಅಭಿವ್ಯಕ್ತಗೊಳಿಸಿ ಇಂಥ ಒಂದು ಪರಂಪರೆಯನ್ನೇ ಸೃಜಿಸಿದರು. ಇವರಲ್ಲಿ ನಿಜ ಗುಣ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಕೂಡಲೂರ ಬಸವಲಿಂಗರು, ಮೈಲಾರ ಬಸವಲಿಂಗ ಶರಣರು, ಬಾಲಲೀಲಾ ಮಹಾಂತ ಶಿವಯೋಗಿಗಳು ಮುಖ್ಯರು. ಇವರು ವೀರಶೈವ ಧರ್ಮತತ್ವ, ಸಿದ್ಧಾಂತ ಅನುಭಾವ ಭಕ್ತಿಗಳನ್ನು ತಮ್ಮ ರಚನೆಗಳಲ್ಲಿ ಪ್ರತಿಪಾದಿಸಿದ್ದರೆ, ವೈಷ್ಣವ ಮತತತ್ವ, ನೀತಿ–ಬೋಧೆಗಳನ್ನು ಪುರಂದರದಾಸ, ಕನಕದಾಸಾದಿಗಳು, ಜೈನಮತಸಾರ ಭಕ್ತಿಯನ್ನು ರತ್ನಾಕರವರ್ಣಿ ಮುಂತಾದವರು ತಮ್ಮ ಸುಳಾದಿ, ಕೀರ್ತನೆ, ಶತಕಗಳಲ್ಲಿ ನಿರೂಪಿಸಿದ್ದಾರೆ.

ವೀರಶೈವ ಶರಣರು, ಅನುಭಾವಿಗಳು ರಚಿಸಿದ ಕೈವಲ್ಯದರ್ಪಣ, ಭಕ್ತಿಸುಧಾಸಾರ, ಸುಬೋಧಸಾರ, ಕೈವಲ್ಯಕಲ್ಪವಲ್ಲರಿ ಮುಂತಾದ ಕೃತಿಗಳ ಶಿಷ್ಟ ಪರಂಪರೆಯಿಂದಾಗಿ ಇವರನ್ನು ಮಹಿಮರೆಂದು ಜನ ಮೆಚ್ಚಿ, ಇವರ ರಚನೆಗಳನ್ನು ಹಾಡುತ್ತ ಬಂದಿದ್ದಾರೆ; ಈ ಅನುಭಾವಿಗಳ ಹಾಡು ಅವರ ಪಾಲಿಗೆ ಮಂತ್ರ, ಜಡಕ್ಕೆ ಚೈತನ್ಯ ತುಂಬುವ, ಭವಜೀವನವನ್ನು ಶಿವಜೀವನವನ್ನಾಗಿ ಪರಿವರ್ತಿಸುವ ಅಪೂರ್ವ ಶಕ್ತಿ, ಮೋಡಿ ಈ ರಚನೆಗಳಿಗೆ ಇರುವುದರಿಂದ ಇಂದಿಗೂ ಇವರ ಹಾಡುಗಳನ್ನು ಜನ ಭಿನ್ನ ಭಿನ್ನ ಸಂದರ್ಭಗಳಲ್ಲಿ ಪುರಾಣ, ಕೀರ್ತನೆ, ಭಜನೆಗಳಲ್ಲಿ ಹಾಡಿ ನಲಿಯುತ್ತಾರೆ. ಈ ಮಹಿಮರ ಸಾಲಿನಲ್ಲಿ ಸೇರುವವರೆ ಮೈಲಾರದ ಬಸವಲಿಂಗ ಶರಣರು.

ಹಾಡುಗಬ್ಬಗಳನ್ನು ರಚಿಸಿದ ಶರಣ ಕವಿಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದಾಗಿದೆ.

ಒಂದು : ಭಕ್ತಿಪರವಶರಾಗಿ, ಅಂದಂದಿನ ನೈಜಘಟನೆ, ವಿಷಯವಸ್ತುಗಳ ಅನುಭವದಿಂದ ಪ್ರೇರಿತರಾಗಿ, ಆತ್ಮಾನಂದ ಪುಲಕಿತರಾಗಿ ಸ್ಫೂರ್ತಿಯಿಂದ ಹೊಮ್ಮಿದ ಹಾಗೆ ಹಾಡುಗಳ ರಚನೆ ಮಾಡಿದವರು – ಅಥವಾ 'ಒಲಿದಂತೆ ಹಾಡಿದವರು'; ಎರಡು : ಧರ್ಮ ತತ್ತ್ವ, ನೀತಿ, ಸದಾಚಾರ, ಸಿದ್ಧಾಂತಗಳನ್ನು ತಮ್ಮಲ್ಲಿ ಅಳವಡಿಸಿ, ಸ್ವಾನುಭವಕ್ಕೆ ತಂದುಕೊಂಡು, ಸಹಜ ಅರಿವಿನ ನಿಲವಿನಲ್ಲಿ ನೆಲೆನಿಂದು ತಮಗೆ ಒಡಮೂಡಿದ, ತಮ್ಮಲ್ಲಿ ಸ್ಫುರಿಸಿದ ಅನುಭಾವವನ್ನು ದೃಷ್ಟಾಂತ, ನಿದರ್ಶನ ಮತ್ತು

ಸಾಮುತಿಗಳನ್ನೊಳಗೊಂಡ ಹಾಡುಗಳನ್ನು–ಕೆಲವುಟ್ಟಿಗೆ ಉದ್ದೇಶ ಪೂರ್ವಕವಾಗಿ ಎಂದರೂ ಸರಿಯೇ – ರಚಿಸುವುದು. ಮೈಲಾರ ಬಸವಲಿಂಗ ಶರಣರು ಈ ಎರಡನೆಯ ಗುಂಪಿಗೆ ಸೇರಿದವರು.

ಬಸವಲಿಂಗ ಶರಣರು ತಮ್ಮಲ್ಲಿದ್ದ ಸಹಜ ಕವಿತಾಶಕ್ತಿಯನ್ನು ಪ್ರಜ್ಞಾಪೂರ್ವಕವಾಗಿ ಬಳಸಿದ್ದಾರೆ. ತಾವು ಕಂಡುಂಡ ಶಿವಾನುಭಾವವನ್ನು ಅತ್ಯಂತಸೂಕ್ಷ್ಮವಾಗಿ ಮತ್ತು ಅಷ್ಟೇ ಖಚಿತವಾಗಿ, ಕೆಲವೊಮ್ಮೆ ಕಾವ್ಯಸೌಂದರ್ಯವನ್ನು ಮೈಗೂಡಿಸಿ, ತಮ್ಮ ಹಾಡುಗಳನ್ನು ರಚಿಸಿದ್ದಾರೆ.

ನಿಜಗುಣ, ಸರ್ಪಭೂಷಣ ಶಿವಯೋಗಿಗಳ ರಚನೆಗಳಷ್ಟೇ ಸರಳ, ಸುಲಲಿತವಾಗಿರುವ ಮೈಲಾರ ಬಸವಲಿಂಗ ಶರಣರ ಕೃತಿಗಳು ವೀರಶೈವ ಧರ್ಮದ ತಾತ್ತ್ವಿಕ ಸ್ವರೂಪಕ್ಕೆ ಮೀಸಲಾಗಿವೆ. ವೀರಶೈವಧರ್ಮದ ವಿಶಿಷ್ಟ ಲಕ್ಷಣಗಳು ಅಷ್ಟಾವರಣ, ಪಂಚಾಚಾರ, ಮತ್ತು ಷಟ್‌ಸ್ಥಲ. ಈ ಮೂರೂ ಲಕ್ಷಣಗಳ ಅನುಸಂಧಾನ, ಆಚರಣೆ ಅನುಭಾವಗಳ ಭಿನ್ನ ಭಿನ್ನ ಹಂತದ ವಿವೇಚನೆಯನ್ನು ಬಸವಲಿಂಗ ಶರಣರು ತಮ್ಮ ಕೃತಿಗಳಲ್ಲಿ ತುಂಬ ಮನೋಜ್ಞವಾಗಿ – ಒಮ್ಮೊಮ್ಮೆ ಗಡುಚು ಎನ್ನಿಸಿದರೂ– ಸುಳುಹುದೋರಿ, ತಿಳಿಹೇಳುವ ಗುರುವಿನ ಹಾಗೆ–ತೊಳೆ ತೊಳೆ ಬಿಡಿಸಿಕೊಡುತ್ತಾರೆ.

ಕರ್ನಾಟಕದ ಪುಣ್ಯವಾಹಿನಿ ತುಂಗಭದ್ರೆಯ ಎರಡೂ ದಂಡೆಗಳಲ್ಲಿ ಹಬ್ಬಿರುವ ಬಳ್ಳಾರಿ, ಹೊಸಪೇಟೆ, ಕೊಟ್ಟೂರು, ಹಡಗಲಿಗಳಲ್ಲೂ, ಕೊಪ್ಪಳ, ಹುಬ್ಬಳ್ಳಿ, ಧಾರವಾಡ, ಚಿತ್ರದುರ್ಗ

ಮುಂತಾದ ಸ್ವಲ್ಪ ಒಳಪ್ರದೇಶದಲ್ಲೂ ಬಸವಲಿಂಗ ಶರಣರ ಕೃತಿಗಳು ಇಂದಿಗೂ ಜನಪ್ರಿಯವಾಗಿವೆ. ಸ್ವಾನುಭವಪ್ರೇರಿತ ಅಮಾಯಿಕ ಬೆಡಗಿನಿಂದ ಕೂಡಿದ ಇವರ ರಚನೆಗಳಲ್ಲಿರುವ ಅಧಿಕಾರವಾಗ ಶುಭ್ರ ಆಕಾಶದ ಚಂದ್ರಕಾಂತಿಯಾದರೆ, ಅಲ್ಲಿರುವ ಸೂತ್ರಬದ್ಧವಾದ ತರ್ಕ ಪ್ರಖರ ಸೂರ್ಯನ ತೀಕ್ಷ್ಣತೆ. ಚುರುಕು
ಗಳನ್ನು ಮುಟ್ಟಿಸುತ್ತದೆ.

ವೀರಶೈವ ಧರ್ಮದ ಆಚಾರ ವಿಚಾರಗಳು ಜನತೆಯಿಂದ ಜಾರಿ ಮಸಕಾಗಿ ಹೋಗುತ್ತಿದ್ದ ಕಾಲದಲ್ಲಿ ಮೈಲಾರ ಬಸವಲಿಂಗ ಶರಣರ ಕೃತಿಗಳು ಜನತೆ ತಮ್ಮ ಧರ್ಮ ಪರಿಪಾಲನೆ ಮಾಡಿ
ಕೊಳ್ಳುವಲ್ಲಿ, ಸಂಪ್ರದಾಯ ಸಂಸ್ಕೃತಿಗಳನ್ನು ಅಚ್ಚಳಿಯದಂತೆ ಪೋಷಿಸಿಕೊಳ್ಳುವಲ್ಲಿ ಕೆಲಮಟ್ಟಿಗಾದರೂ ನೆರವಾದುವು.

ಕಳೆದ ೧೦೦–೧೫೦ ವರುಷಗಳಲ್ಲಿ ಆಗಿ ಹೋದ ಶ್ರೀಮದ್ಘನ ಶಿವಯೋಗಿಗಳಿಗೆ ಮೈಲಾರ ಶರಣರ ಕೃತಿಗಳು ಪರಮಪ್ರಿಯವಾಗಿದ್ದುವು. ಧಾರವಾಡದ ಶ್ರೀ ಮುರುಘಾ ಮಠದ ಮೃತ್ಯುಂಜಯ ಅಪ್ಪಗಳಿಗೆ ಇವರ ರಚನೆ ನಿತ್ಯಮಂತ್ರ
ವಾಗಿದ್ದುವು. ಅನೇಕ ಮಠಮಾನ್ಯಗಳಲ್ಲಿರುವ ನಮ್ಮ ಕೆಲ ಮಠಾಧಿಪತಿಗಳು ತಮ್ಮ ಅವಿರತ ಸಾಮಾಜಿಕ ಕಾರ್ಯ ನಿರ್ವಹಣೆಯಲ್ಲಿ ತೊಡಗಿದಾಗ, ಭಕ್ತಾದಿಗಳಿಗೆ ಬೋಧಿಸುವಾಗ, ಪ್ರವಚನ ನೀಡುವಾಗ ಶರಣಕವಿ ಮೈಲಾರ ಬಸವಲಿಂಗ ಶರಣರ ರಚನೆಗಳನ್ನು ಹಾಡಿ, ಹೇಳಿ ಹರಸುತ್ತಾರೆ. ಹೀಗಾಗಿ ಅವರ ಕೃತಿಗಳು ಇಂದಿಗೂ ಧರ್ಮಪಥದ ಕೈದೀಪದಂತೆ ಕಂಗೊಳಿಸುತ್ತಿವೆ.

ಈ ಶರಣಕವಿಯ ದೃಷ್ಟಿಗೆ ಕಂಡ ಪಂಪಾಕ್ಷೇತ್ರದ ಸಂಪಗೆ ಮರವೊಂದರ ವರ್ಣನೆ ಕೇಳಿ:

"ಪಂಪಾಕ್ಷೇತ್ರದೊಳೊಂದು ಸಂಪಗೆಯ ಸಸಿಯುಂಟು
ಕಂಪುಂಟು ಗಾಳಿ ತಂಪುಂಟು ಒಳಗಿಂಪಿನ
ಗುಂಪುಂಟು ಗುರುವೆ ಕೃಪೆಯಾಗು"

ಬಸವಲಿಂಗ ಶರಣರು ಕಂಡ ಅನುಭಾವದ ಸಂಪಗೆಯ ನರುಗಂಪು ಇಂದಿಗೂ ಹರಡಿದೆ – ಅದನ್ನು ಆಘ್ರಾಣಿಸುವ ಮೂಗು ಬೇಕು – ಮಾಗಿದ ಮನಸ್ಸು ಬೇಕು.

# ೨. ಬಸವಲಿಂಗ ಶರಣರ ಜೀವನ-ಕೃತಿ

ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯಲ್ಲಿರುವ ಕೊರತೆ ಗಳೆಂದರೆ ಖಚಿತವಾದ ಐತಿಹಾಸಿಕ ಅಂಶ, ಅಧಿಕೃತ ದಾಖಲೆಗಳ ಅಭಾವ ಮತ್ತು ಪರಸ್ಪರ ವಿರೋಧಿ ಐತಿಹ್ಯ. ಸಂದಿಗ್ಧತೆಗಳು. ಇದರಿಂದಾಗಿ ನಮ್ಮ ಅನೇಕ ಕವಿಗಳ ಕಾಲ. ಮತಕ್ಕೆ ಸಂಬಂಧಿಸಿದ ನಿರ್ಣಯಗಳು ಡೋಲಾಯಮಾನವಾಗಿಯೇ ಉಳಿದಿವೆ.

ಮೈಲಾರ ಬಸವಲಿಂಗ ಶರಣರ ಜೀವನದ ಚಾರಿತ್ರಿಕ ಅಂಶಗಳನ್ನು ಸಂಗ್ರಹಿಸಲು ೧೯೪೪ನೆಯ ಇಸ್ವಿಯಲ್ಲಿಯೇ ಪ್ರಯತ್ನಿಸಿದ ಪ್ರೊ. ಎಸ್. ಎಸ್. ಬಸವನಾಳರು ಐತಿಹಾಸಿಕ ಪ್ರಜ್ಞೆ ಮತ್ತು ವಿವೇಚನೆಯ ಹಿನ್ನೆಲೆಯಲ್ಲಿ ನಮ್ಮ ಕವಿಗಳ ಚರಿತ್ರೆಯನ್ನು ಅಧಿಕೃತವಾಗಿ ರೂಪಿಸುವುದು ತುಂಬ ದುಸ್ತರ ವಾದುದು ಎಂದು ಹೇಳಿದ್ದಾರೆ.

ಸು. ೧೭೮೦ರಲ್ಲಿ ಜನ್ಮವೆತ್ತಿದ ಬಸವಲಿಂಗ ಶರಣರ ಮೂಲ ಹೆಸರು ಬಸಪ್ಪ ಅಥವಾ ಬಸವಪ್ಪ. ಇಂದಿನ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಪ್ರಸಿದ್ಧ ಕ್ಷೇತ್ರವಾದ ಮೈಲಾರದ ಒಂದು ಬಣಜಿಗರ ಕುಟುಂಬದಲ್ಲಿ ಹುಟ್ಟಿದ ಬಸವಪ್ಪನ ವಿಷಯ ವಾಗಿ ಇಂದು ಯಾವ ವಿಷಯವೂ ಗೊತ್ತಾಗುವುದಿಲ್ಲ. ಅವರ

ತಂದೆ ತಾಯಿಗಳ ಹೆಸರು ತಿಳಿಯದು. ವ್ಯಾಪಾರ ವೃತ್ತಿಯ ಕುಟುಂಬದಲ್ಲಿ ಬೆಳೆದ ಬಸಪ್ಪ ಬಾಲ್ಯದಿಂದಲೇ ತೀಕ್ಷ್ಣಮತಿ ಯಾಗಿದ್ದನಂತೆ.

ಮಹಿಮೆ ಪವಾಡಗಳಿಂದ ಕೂಡಿದ ಸುಕ್ಷೇತ್ರ ಮೈಲಾರ. ಪಶ್ಚಿಮವಾಹಿನಿ ತುಂಗಾನದಿ, ಚೌಡಯ್ಯದಾನಪುರದ ಸಿಜ ಸಿಂಹಾಸನದ ಪುಣ್ಯ ಪುರುಷರು. ವೀರಭದ್ರ, ಕುರುವತ್ತಿಯ ಬಸವಣ್ಣ ಹೀಗೆ ಮಹಾಮಹಿಮರ. ತೀರ್ಥಕ್ಷೇತ್ರಗಳ ನಿಸರ್ಗ ರಮ್ಯ ಮತ್ತು ಭಕ್ತಿಪ್ರೇರಕ ಪರಿಸರದಲ್ಲಿ ಬೆಳೆದ ಬಸಪ್ಪನು ಶಾಲೆಯಲ್ಲಿ ಕಲಿತುದಕ್ಕಿಂತ ಹತ್ತುಪಟ್ಟು ಜ್ಞಾನವನ್ನು ಸ್ವಾಧ್ಯ ಯನದಿಂದ ಗಳಿಸಿದ. ಈತನಿಗೆ ಶಾಲಾಗುರುಗಳು ಯಾರು ಎಂದು ತಿಳಿಯುವುದಿಲ್ಲ. ಆದರೆ ಅಂದಿನ ಆ ಅಯ್ಯನವರು ಈತನಿಗೆ ಸಂಸ್ಕೃತ ಅಮರಕೋಶ ಓದಿಸುವುದಲ್ಲದೆ ಕನ್ನಡ ಕಾವ್ಯಗಳನ್ನು ಸರಾಗವಾಗಿ ಓದುವ ಪರಿಪಾಠ ಹಾಕಿಕೊಟ್ಟರು. ಬಹುಬೇಗ ಶಾಲೆಗೆ ಶರಣು ಹೊಡೆದ ಬಸಪ್ಪ ತಾನು ತಾನೇ ಅನೇಕ ಕಾವ್ಯ, ವಚನ, ಕೀರ್ತನೆಗಳನ್ನು ಅಭ್ಯಾಸ ಮಾಡಿ ಕಾಲಕ್ರಮದಲ್ಲಿ ವೀರ ಶೈವ ಸಾಹಿತ್ಯ, ಧರ್ಮ ತತ್ತ್ವಗಳಲ್ಲಿ ವಿಶೇಷವಾದ ಅಭಿರುಚಿ-ಯನ್ನು ಬೆಳೆಸಿಕೊಂಡ.

ಅಲ್ಲಲ್ಲಿ ಮಠ ಮಾನ್ಯಗಳಲ್ಲಿ ನಡೆಯುವ ಪುರಾಣ ಕೀರ್ತನೆ ಗಳನ್ನು ಕೇಳಲು ಹೋಗುವ ಮೈಲಾರ ಜನರ ಗುಂಪಿನಲ್ಲಿ ಬಸಪ್ಪ ಯಾವಾಗಲೂ ಹಾಜರು.

ಬಸಪ್ಪ ಇಂದು ರಾತ್ರಿ ಮನೆಯಲ್ಲಿಲ್ಲ ಎಂದರೆ ಅಂದು ನೆರೆಹಳ್ಳಿಯ ಆಟ, ಪುರಾಣ, ಕೀರ್ತನೆಗೆ ಈತ ಹೋಗಿದ್ದಾನೆ ಎನ್ನುವುದು ಆತನ ತಂದೆ ತಾಯಿಗಳಿಗೆ ಖಾತ್ರಿ.

ಮೈಲಾರಲಿಂಗನ ಜಾತ್ರೆಯಲ್ಲಿ ನಡೆಯುವ ನಿತ್ಯ ಪವಾಡಗಳು. ಗೊರವರ ವಿಚಿತ್ರವೇಷ. ಅವರ ಮಾರ್ದನಿಗೊಡುತ್ತ ಗುಂಗುಹಿಡಿಸುವ ಗಂಟಾನಾದ. ಡಮರುಗದ ತಾಡನ. ಹಾಡಿನ ಲಯ ಒಂದೊಂದೂ ಬಸಪ್ಪನಿಗೆ ವಿಸ್ಮಯಕಾರಿ ಅಂಶಗಳು. ಬಾಲಕ ಅದನ್ನೇ ನೋಡುತ್ತ ಕೂತುಬಿಡುವ. ಒಂದು ದಿನ ಮನೆಯಲ್ಲಿದ್ದ ಕಂಬಳಿಯನ್ನೇ ಮೈಗೆ ಸುತ್ತಿ. ಭಂಡಾರ ಹಣೆಗೆ ಹಚ್ಚಿಕೊಂಡು ಹಾಡಿದ್ದೇ ಹಾಡಿದ್ದು. ಈತನ ಹಾಡಿನ ಜೊತೆಗೆ ಇಡೀ ಓಣಿಯ ಜನ ನೆರೆದಿದ್ದರಂತೆ. ಹುಚ್ಚು ಆವೇಶದಿಂದ ತಾನು ಕೇಳಿದ ಗೊಗ್ಗಯ್ಯಗಳ ಹಾಡುಗಳನ್ನು ಹಾಡಿದ ಬಾಲಕ ಬಸಪ್ಪ ಒಂದು ರೀತಿಯ ಭಾವೋನ್ಮಾದಕ್ಕೆ ಒಳಗಾಗಿದ್ದನಂತೆ. ಇಂಥ ಭಾವೋನ್ಮಾದವೇ ಬಸಪ್ಪನವರ ಜೀವನದುದ್ದಕ್ಕೂ ಉಳಿದು ಭಕ್ತಿಯಾಗಿ. ಧರ್ಮನಿಷ್ಠೆಯಾಗಿ. ರೂಪುಗೊಂಡು ಅವರ ಬದುಕನ್ನು ನಿರ್ದೇಶಿಸಿತು.

ವರ್ಷಗಳು ಉರುಳುತ್ತಹೋದಂತೆ ಬಸಪ್ಪನ ಅಂತರಂಗ ಬಿಚ್ಚಿಕೊಳ್ಳುತ್ತಹೋಯಿತು. ಚಿತ್ತ ಅರಳುತ್ತ ನಡೆಯಿತು. ಶಿವಶರಣರ ವಚನಗಳು. ಹರಿಹರ ರಾಘವಾಂಕ. ಷಡಕ್ಷರದೇವ ಮುಂತಾದವರ ಕಾವ್ಯಗಳು. ಅಕ್ಕಮಹಾದೇವಿ. ಸಿದ್ಧರಾಮ. ನಿಜಗುಣ ಮೊದಲಾದವರ ತ್ರಿವಿಧಿ. ಕೈವಲ್ಯಚಿಂತಾಮಣಿಗಳು. ಮನೆಯಲ್ಲಿ ಕಟ್ಟುಕಟ್ಟಾಗಿ – ತಾಡವೋಲೆ. ಕೋರಿಕಾಗದ – ಕೂಡಿದುವು: ಬಸಪ್ಪನ ಅಧ್ಯಯನ ತೃಷೆಗೆ ಪಾದೋದಕವಾದುವು. ಬರಬರುತ್ತ ಅಧ್ಯಯನಕ್ಕಿಂತ ಅನುಸಂಧಾನವೇ ಅವರ ಚಿತ್ತವೃತ್ತಿಯಾಯಿತು.

ಮನೆತನದಿಂದ ಬಂದ ವ್ಯಾಪಾರೀ ವೃತ್ತಿಗಾಗಿ ಬಸಪ್ಪ ಆಗಾಗ–ಸವಣೂರ ಪೇಟೆ. ಹುಬ್ಬಳ್ಳಿ ಪೇಟೆ. ಇಕ್ಕೇರಿ ಪೇಟೆಗಳಿಗೆ ಹೋಗಿ ಸರಕು ಕೊಂಡು ಕೊಟ್ಟು ಬರುತ್ತಿದ್ದರು.

ಮೈಲಾರ ಕ್ಷೇತ್ರವೆಂದರೆ ಸದಾಕಾಲ ಜಾತ್ರೆಯೇ. ಹುಣ್ಣಿವೆ ಗೊಮ್ಮೆಯಂತೂ ಸಣ್ಣ ಪರಿಸೆಯೇ ಕೂಡುತ್ತದೆ. ಭಾರತ ಹುಣ್ಣಿಮೆಯ ಪರಿಸೆ ಸತತ ಹದಿನೈದು ದಿನಗಳ ಹಬ್ಬ–ಜಾತ್ರೆ ಮೋಜು. ಕನ್ನಡ ನಾಡಿನ ಮೂಲೆ ಮೂಲೆಯಿಂದ ಜನಬಂದು ಸೇರುತ್ತಾರೆ. ಈ ಸಂದರ್ಭದಲ್ಲಿ ಬಂದ ಜನರಿಗೆ ಬಸಪ್ಪನವರನ್ನು ಕಾಣುವುದು, ಅವರ ಜೊತೆ ಮಾತಾಡುವುದು, ಅವರ ಬಾಯಿಂದ ತತ್ತ್ವಪದ ಕೇಳುವುದು ರೂಢಿಯಾಗಿ ಬಿಟ್ಟಿತ್ತು. ಜಾತ್ರೆಗೆ ಬಂದ ಈ ಎಲ್ಲರ ಯೋಗಕ್ಷೇಮ ವಿಚಾರಣೆ. ಅವರ ಸುಖದುಃಖಗಳನ್ನು ಕೇಳಿ ವಾತ್ಸಲ್ಯದ ಎರಡು ಹಿತವಚನ ಹೇಳುವುದು ಬಸಪ್ಪನವರಿಗೂ ಅಷ್ಟೇ ಪ್ರಿಯವಾಗಿತ್ತು. ಅವರ ವ್ಯಾಪಾರವಂತೂ ದಿನೇ ದಿನೇ ಅಭಿವೃದ್ಧಿ ಹೊಂದುತ್ತಲೇ ಇತ್ತು. ಆದರೆ ಅವರು ಅಧಿಕ ಧನಾರ್ಜನೆಗೆ ಎಂದೂ ಮನಸ್ಸು ಮಾಡಲಿಲ್ಲ. ಪ್ರತಿದಿನ ಐದಾಣೆಯಷ್ಟು ವ್ಯಾಪಾರ ಆಗುವವರೆಗೆ ಅಂಗಡಿಯಲ್ಲಿ ಕುಳಿತಿದ್ದು ಆ ಬಳಿಕ ತಮ್ಮ ಒಳಅಂಕಣಕ್ಕೆ ಹೋಗಿ ಬಿಡುತ್ತಿದ್ದರು. 'ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ' ಎನ್ನುವಂತಿದ್ದ ಅವರ ವ್ಯಾಪಾರದ ನೀತಿ ನಿಯತ್ತು ಪ್ರಾಮಾಣಿಕ ವ್ಯವಹಾರಕ್ಕೆ ಮಾದರಿಯಾಯಿತು. ಜಾತ್ರೆಯ ಸಮಯವೇ ಇರಲಿ, ಇತರ ಸಂದರ್ಭವೇ ಆಗಲಿ ಯೋಗ್ಯಬೆಲೆಯ ಸರಕುಗಳಿಗಾಗಿ ಜನ ಹೆಚ್ಚಾಗಿ ಬಸಪ್ಪನವರ ಅಂಗಡಿಗೇ ಬರುತ್ತಿದ್ದರು. ವ್ಯಾಪಾರದ ಸಮಯವನ್ನು ಉಳಿದು ಇತರ ಬಹು ಭಾಗದ ಕಾಲವನ್ನು

ಬಸಪ್ಪನವರು ಕ್ಷೇತ್ರಕ್ಕೆ ಬಂದ ಗೌರವರ ಗುಂಪು. ಭಜನಾಮೇಳಗಳ ಹಾಡುಗಳನ್ನು ಕೇಳುವುದು - ಕೈವಲ್ಯಪದಗಳನ್ನು ಹಾಡಿಸುವುದು ಇಂಥದರಲ್ಲಿ. ಮತ್ತು ತ್ರಿಕಾಲಪೂಜೆ - ನಿತ್ಯನಿಯಮಗಳ ಪರಿಪಾಲನೆ. ಪೂಜಾನುಸಂಧಾನಗಳಲ್ಲಿ ಕಳೆಯುತ್ತಿದ್ದರು. ಅನವಶ್ಯಕವಾಗಿ ಗ್ರಾಮದ ಇತರ ಉಸಾಬರಿಗಳಲ್ಲಿ ಅವರು ಸೇರಿಕೊಳ್ಳುತ್ತಿರಲಿಲ್ಲ; ಮತ್ತು ಅದು ಅವರ ಪ್ರವೃತ್ತಿಯಲ್ಲೂ ಇರಲಿಲ್ಲ. ಚಿಂತನಶೀಲರಾದ ಬಸಪ್ಪನವರು ತಮ್ಮ ಚಿತ್ತಶುದ್ಧಿಯನ್ನು ಅಂತರಂಗದಲ್ಲಿ ವೃತ್ತಿಶುದ್ಧಿ-ಕಾಯಕ-ಯನ್ನು ಬಹಿರಂಗದಲ್ಲಿ ಜಾಗರೂಕತೆಯಿಂದ ಅಳವಡಿಸಿಕೊಂಡು ಬರುತ್ತಿದ್ದರು. ಇದನ್ನು ಸಹಿಸದ ಕೆಲವರು ಇವರನ್ನು 'ಗರ್ವಿ' 'ಅಹಂಕಾರಿ' ಎಂದು ಆಡಿಕೊಳ್ಳುತ್ತಿದ್ದರು. ಏನಾದರೂ ಮಾಡಿ ಸರಕಾರದ ಉನ್ನತ ಅಧಿಕಾರಿಗಳಿಗೆ ಎಂಥದೋ ದೂರು ಹೇಳಿ ಇವನನ್ನು ಊರು ಬಿಡಿಸಬೇಕು ಎಂದು ಕೆಲವರ ಸಂಚು.

ಒಮ್ಮೆ ಬಳ್ಳಾರಿ ಭಾಗದಿಂದ ಬಂದ ಸರ್ಕಾರದ ಅಧಿಕಾರಿಗಳ ಮುಂದೆ, ಕೆಲವರು 'ಆ ಬಸಪ್ಪನಿಗೆ ಸೊಕ್ಕು; ಅವನು ಯಾವಾಗಲೂ ವಿಷ್ಣುನಿಂದೆಯಲ್ಲಿಯೇ ತೊಡಗಿರುತ್ತಾನೆ. ಅವನನ್ನು ಇಲ್ಲಿಂದ ಬಿಡಿಸಿ ಬೇರೆ ಯಾವುದಾದರೂ ಊರಿಗೆ ಕಳಿಸಬೇಕು' ಎಂದು ಮುಂತಾಗಿ. ಅರ್ಜಿ ಕೊಟ್ಟು ಆಗ್ರಹಪಡಿಸಿದರು. ಅಧಿಕಾರಿಗಳಿಂದ ಬಸಪ್ಪನವರಿಗೆ ತಕ್ಷಣ ಕರೆಹೋಯಿತು. ಚಾವಡಿಯಲ್ಲಿದ್ದ ಅಧಿಕಾರಿಗಳನ್ನು ಕಂಡ ಬಸಪ್ಪನವರು ಕೂಡಲೇ ಸನ್ನಿವೇಶವನ್ನು ಅರ್ಥ ಮಾಡಿಕೊಂಡರು. 'ನೀನು ಯಾವಾಗಲೂ ಅನ್ಯಮತ ನಿಂದೆಯಲ್ಲಿಯೇ ತೊಡಗಿದ್ದು ಬಹಳ ಕಿರುಕುಳ

ಕೊಡುತ್ತಿರುವೆಯಂತೆ. ಜನ ಇದರಿಂದ ರೊಚ್ಚಿಗೆದ್ದಿದ್ದಾರೆ. ಇದ ಕ್ಕೇನು ಹೇಳುತ್ತೀ?' ಅಧಿಕಾರಿಗಳು ಕೇಳಿದರು. 'ಛೇ ಛೇ ನಾನು ಅಂಥದೇನೂ ಮಾಡಿಲ್ಲ – ಆ ರೀತಿ ನಡೆಯುವುದು ಸಾಧು ವಾದುದೂ ಅಲ್ಲ' ಬಸಪ್ಪನವರ ಉತ್ತರ.

'ಹಾಗಾದರೆ ನಿನ್ನ ಅಭಿಪ್ರಾಯವನ್ನು ಒಂದು ಪದ್ಯ ರೂಪದಲ್ಲಿ ಬರೆದು ಕೊಡಬೇಕು.

'ಹಾಗೆಯೇ ಆಗಲಿ' ಎಂದು ಬಸಪ್ಪನವರು ಸ್ವಲ್ಪ ಸಮಯ ಕೇಳಿಕೊಂಡು ಮನೆಗೆ ಬಂದರು. ಯಾವ ರೀತಿ ಉತ್ತರ ರಚಿಸ ಬೇಕು? ತಮ್ಮ ಮತಾಚರಣೆ. ಶ್ರದ್ಧೆಗಳಿಗೆ ಭಂಗ ಬರಕೂಡದು: ಅಧಿಕಾರಿಗಳ ನಿಷ್ಠೆಗೂ ಕುಂದುಂಟಾಗಬಾರದು. 'ಹರಿ' ಶಬ್ದದ ನಾನಾರ್ಥಗಳು, ಭಕ್ತ ಶಬ್ದದ ಶ್ಲೇಷೆ ಬಳಸಿ ಒಂದು ಪ ದ್ಯ ರ ಅಧಿಕಾರಿಗಳ ಕೈಗೆ ಕೊಟ್ಟರು.

'ನೀವೇ ಓದಿ' ಎಂದಾಗ ಬಸಪ್ಪನವರು ಸರಾಗ ಹಾಡಿದರು.

"ಹರಿಯೆ ಬ್ರಹ್ಮಾಂಡ ಪಿಂಡಾಂಡ ದಶದಿಗ್ ಭರಿತ
ಹರಿಯೆ ತ್ರೈಭುವನ ಅಟ್ಟುಂಬ ಸಕಲ ಜೀವಕ್ಕಾದಿ
ಹರಿಯು ಬಿಟ್ಟರಗಳಿಗೆ ಜೀವಿಸುವರಾರಿಲ್ಲ
ಲೋಕದೊಳಗದು ಕಾರಣ
ಹರಿ ಭಕ್ತನಹುದು, ಹರಭಕ್ತನಲ್ಲ ನಾಂ
ನರಸಿಂಹ ಮದುಸೂದನ ಸಿರಿಯರಸ ವಾ
ಸರ ಯಂಕಟಾಚಲಾದಿ ಪ್ರಣವ ಸ್ಮರಣೆಯೊಳಗಿರ್ಪೆಂ ಸದಾ

ಈ ಪದ್ಯದಲ್ಲಿ ಬರುವ 'ಹರಿ' ಶಬ್ದಕ್ಕೆ 'ನೀರು' 'ಗಾಳಿ' 'ಸೂರ್ಯ' ಮುಂತಾದ ಅರ್ಥಗಳ ಜೊತೆಗೆ 'ಶಿವ' ಎನ್ನುವ ಅರ್ಥವೂ ಇದೆ. 'ಹರಿ' ಪದದ ಶ್ಲೇಷಾರ್ಥವಾಗಿರುವ 'ಶಿವ' ಶಬ್ದವನ್ನು ಈ ಪದ್ಯಕ್ಕೆ ಅನ್ವಯಿಸಿದರೆ ಹರಭಕ್ತನ ಪರವಾದ ಭಾವನೆ ಸಹಜಸ್ಫುಟಗೊಳ್ಳುತ್ತದೆ. ಅದು ಹೀಗೆ:

ಶಿವನು ಕಾಯದಲ್ಲಿ ಬ್ರಹ್ಮಾಂಡದಲ್ಲಿ ದಶದಿಕ್ಕುಗಳಲ್ಲಿ ತುಂಬಿದ್ದಾನೆ.

ಸಕಲ ಲೋಕದ ಅಟ್ಟುಣ್ಣುವ ಸಮಸ್ತ ಜೀವಿಗಳಿಗೆ ಶಿವನು ಮೂಲ. (ಅಧಿಪತಿ).

ಶಿವನನ್ನು ಬಿಟ್ಟು ಅರಗಳಿಗೆ ಕೂಡ ಜೀವಿಸುವವರು ಯಾರೂ ಇಲ್ಲ.

'ಹರಿ' – ಶಿವನನ್ನು ಪೂಜಿಸಿರುವುದರಿಂದ ಭಕ್ತ. ಹರನು ಯಾರಿಗೂ ಭಕ್ತನಲ್ಲ.

—ಎಲ್ಲರೂ ಅವನಿಗೆ ಭಕ್ತರು – ಅದ್ದರಿಂದ ನಾನು. ಸರ್ವಜೀವಿಶ್ರೇಷ್ಠ, ದೈತ್ಯಸಂಹಾರಕ ಸಕಲಸಂಪದಕ್ಕೆ ಒಡೆಯ, ಸಕಲಪ್ರಕಾಶ. ಪಾಪ ಪರಿಹಾರಕ ಮತ್ತು ಮಂತ್ರ ಸ್ವರೂಪನಾಗಿ ಇರುವ ಶಿವಸ್ಮರಣೆಯಲ್ಲಿ ಸದಾ ಇರುತ್ತೇನೆ'.

ಹರಿ ದೈವ ಎಂದು ಅರ್ಥ ಇಟ್ಟುಕೊಂಡಾಗ ಹರಿಸ್ತುತಿ ಯಾಗಿ ತೋರುವ ಪದ್ಯ ರಚನೆಯು ಒಳಮುರಿಯಲ್ಲಿಯೇ ಸಮಃ

ಶಿವಾಯ' ಪಂಚಾಕ್ಷರಿ ಮಂತ್ರವನ್ನು ಹುದುಗಿಸಿರುವುದು. 'ಹರಿ' ಮತ್ತು 'ಹರ' 'ಭಕ್ತ' ಶಬ್ದಗಳ ಶ್ಲೇಷೆ ಈ ಪದ್ಯಾರ್ಥ ವಿಶೇಷಗಳು.

ಈ ಪದ್ಯವನ್ನು ಕೇಳಿದ ತಕ್ಷಣ 'ಹರಿನಾಮ ಮಹಿಮೆ ಯನ್ನು ತುಂಬ ಚೆನ್ನಾಗಿ ಮಾಡಿದ್ದೀರಿ. ನಿಮ್ಮ ಕವಿತಾ ರಚನೆ ಅದ್ಭುತವಾಗಿದೆ' ಎಂದು ಅಧಿಕಾರಿಗಳು ಮೆಚ್ಚಿ ಗೌರವಿಸಿದರು. ಕೇಡು ಬಗೆಯಬೇಕೆಂದು ಹೊಂಚಿಸಿದ ಚಾಡಿಕೋರರಿಗೆ ಮುಖ ಭಂಗವಾಯಿತು; ನಿರಾಶೆಯೂ ಆಯಿತು.

ಕುಹಕಿಗಳು. ಕೆಲವು ಕಾಲಾನಂತರ ಮತ್ತೆ ಇಂಥದೇ ಒಂದು ಪ್ರಸಂಗದಲ್ಲಿ ಬಸಪ್ಪನವರನ್ನು ಸಿಲುಕಿಸಿದರು. 'ನೀನು ನಿನ್ನ ಅಧಿದೈವತವೇ ಶ್ರೇಷ್ಠ ಎಂದು ಹೇಳುತ್ತಿರುವಿಯೆಂದು ತಿಳಿದು ಬಂದಿದೆ. ಪರದೈವದ ನಿಂದೆ ಸರಿಯಾದುದೇ ?' ಎಂದು ಸರಕಾರಿ ಅಧಿಕಾರಿಗಳು ಕೇಳಿದರು. ವ್ಯಾವಹಾರಿಕಸ್ತರದ ಈ ಪೇಚಿಗೆ ತಕ್ಷಣ ಸುಲಭ ಪರಿಹಾರ ಕಾಣುವದು ಲೇಸು ಎಂದು ಬಗೆದ ಬಸಪ್ಪನವರು 'ಗೋವಿಂದ' ಶಬ್ದದ ಶ್ಲೇಷಾರ್ಥವನ್ನು ಬಳಸಿಕೊಂಡು 'ಗೋವಿಂದನಾದಿ ಗೋವಿಂದ ನಮ್ಮ ಗೋವಿಂದ ನಾದ ಪಾವನ ಪಾಂಡುರಂಗ' ಎನ್ನುವ ಹಾಡು ರಚಿಸಿ ಹೇಳಿ ದಾಗ ಅಧಿಕಾರಿಗಳು ಬಸಪ್ಪನವರ ಕಾವ್ಯ ಚಾತುರ್ಯವನ್ನು ಹೊಗಳಿ ಚಾಡಿಕೋರರಿಗೆ ಛೀಮಾರಿ ಹಾಕಿ ಹೋದರು. ಇಲ್ಲಿ ಪಾಂಡು ರಂಗ ಅಂದರೆ 'ಭಸ್ಮ' ಮತ್ತು 'ಶಿವ' ಈ ಎರಡೂ ಅರ್ಥಗಳಿವೆ. ಅನಾದಿನಾಮ ಗೋವಿಂದ. ಆದರೆ ನಮ್ಮ 'ಪಾಂಡುರಂಗ' – ಭಸ್ಮ ಅನಾದಿಗೋವಿಂದಲೇ ಸೃಷ್ಟಿಯಾದದ್ದು. ಇಂಥ (ಶ್ಲೇಷಾ

ರ್ಥದ) ಹಲವಾರು ಸಾಮಯಿಕ ರಚನೆಗಳನ್ನು ಮತ್ತೆ ಮತ್ತೆ ಹಾಡಿಕೊಂಡ ಬಸಪ್ಪನವರು ಆಗಾಗ ತಮಗೆ ತೋಚಿದಾಗೆಲ್ಲ ಕಂದಪದ್ಯ, ಷಟ್ಪದಿ ದ್ವಿಪದಿಗಳಲ್ಲಿ ಕವಿತೆಗಳನ್ನು ರಚಿಸುವರು. ತಾವೇ ಹಾಡಿ ಸಂತೋಷಪಡುವರು.

ಬಸಪ್ಪನವರ ದಾಂಪತ್ಯ ಜೀವನದ ವಿಷಯವಾಗಿ ಯಾವ ವಿವರಗಳೂ ಸಿಕ್ಕುವುದಿಲ್ಲ. ಕೆಲವು ಕಾಲ ಸಂಸಾರಮಾಡಿದ ಬಸಪ್ಪನವರು ಚಿತ್ತ, ಅಧ್ಯಾತ್ಮದ ಕಡೆಗೆ ಹರಿಯಿತು. ವ್ಯಾಪಾರ ಮತ್ತಿತರ ನಿತ್ಯ ವ್ಯವಹಾರದಲ್ಲಿದ್ದೂ ಅಂತರ್ಮುಖಿಗಳಾಗಿ, ಮಗ್ಗೆಯ ಮಾಯಿದೇವರ ಶತಕತ್ರಯ, ಪಂಪಾಶತಕ ರಕ್ಷಾ ಶತಕ, ವಚನಗಳು, ನಿಜಗುಣ ಮುಂತಾದವರ ಕೃತಿಗಳ ಅಧ್ಯಯನಕ್ಕಾಗಿಯೇ ಹೆಚ್ಚು ಹೆಚ್ಚು ಸಮಯವನ್ನು ಮೀಸಲಾಗಿರಿಸುತ್ತಿದ್ದರು.

ಶಾಸ್ತ್ರಗ್ರಂಥಗಳ ಅಧ್ಯಯನ, ಅರ್ಚನೆ, ಅನುಸಂಧಾನಗಳಿಂದ ಅವರ ಮನಸ್ಸು ಕೆಲಮಟ್ಟಿಗಿನ ಸಮಾಧಾನವನ್ನು ಪಡೆದರೂ ವೀರಶೈವ ಧರ್ಮಾಚರಣೆ, ಕ್ರಿಯೆ, ಅನುಭಾವಗಳ ಸೂಕ್ಷ್ಮಸುಳಿಯು ಅವರ ಚಿತ್ತಕ್ಕೆ ಭಿನ್ನವಾದಂತಾಗಿ ತೀವ್ರ ತಳಮಳಕ್ಕೆ ಒಳಗಾಗುತ್ತಿದ್ದರು. 'ನಗುರೋರಧಿಕಂ' ಎನ್ನುವ ಮಾತು ಮತ್ತೆ ಮತ್ತೆ ಓದುವರು. ಅದನ್ನೇ ಕುರಿತು ಮನನ ಮಾಡುವರು. ಗುರುವಿಗಿಂತ ಅಧಿಕರಾರು ? ಆ ಗುರು ಎಲ್ಲಿ ದೊರೆತಾನು ? ಹೇಗೆ ದೊರೆತಾನು! ಎಂದು ದೊರೆತಾನು ? ಎಂದು ಆತನ ದರ್ಶನವಾದೀತು ? ಹೀಗೆ ಬಸಪ್ಪನವರ ಮನಸ್ಸು ತಳಮಳಗೊಳ್ಳುತ್ತಿತ್ತು. ಶತಕತ್ರಯದ ತಾತ್ವಿಕ ಭಾಗವೇನೋ

ಸರಿ – ಆದರೆ ಅದರ ಅನುಭಾವ – ಅದರ ನಿಲುವು ಊಹೆ. ತರ್ಕ ಬುದ್ಧಿಗಳನ್ನೂ ಮೀರಿ ಸ್ಪಂದಿಸುತ್ತಿದೆ – ಇದನ್ನು ಗಟ್ಟಿಗೊಳಿಸಿ ಚಿತ್ತದಲ್ಲಿ ಆವಿಷ್ಕಾರಗೊಳಿಸುವ ಆ ಗುರುತಂದೆ ಎಂದು ದರ್ಶನಭಾಗ್ಯ ಕರುಣಿಸಿಯಾನು ? ಎಂದು ಬಸಪ್ಪನವರು ತಳಮಳಗೊಳ್ಳುತ್ತಿದ್ದರು. 'ಶ್ರೀಗುರುವೆ ನೀನೆ ಶರಣಾಗೆನಗೆ' ಎನ್ನುವ ನಿಜಗುಣರ ರಚನೆಯನ್ನು ಪುನಃ ಪುನಃ ಹಾಡುವರು.

ಇಂಥದೇ ಒಂದು ಬೆಳಗು ಅವರಿಗೆ ಬಂದ ಸುದ್ದಿ ಹರುಷದ ತವನಿಧಿಯಾಯಿತು. ಅದೇ ಹಾಲವರ್ತಿ ಚೆನ್ನವೀರಸ್ವಾಮಿಗಳವರ ಘನಮನದ ಸುದ್ದಿ ! ಹಂಬಲವು ಹಣ್ಣಾದಾಗ ಚಿತ್ತದಲ್ಲಿ ಅಮೃತಬಿಂದು ಸುರಿಯುವಂತೆ ಹಾಲವರ್ತಿ ಚೆನ್ನವೀರಸ್ವಾಮಿಗಳವರ ದಿವ್ಯಾನುಭಾವದ ವಾರ್ತೆ ಬಸಪ್ಪನವರ ಹೃದಯದಲ್ಲಿ ಹರುಷದ ಹೊನಲು ಹೊಮ್ಮಿಸಿತು. ಯಾಕೆಂದು ತಿಳಿಯದು. ಹತ್ತಾರು ಜನ ಅವರ ಮಹಿಮೆಯನ್ನು ಹಾಡಿ ಹೊಗಳುವವರೇ.

ಕಾಯಕದಲ್ಲಿ ನಿರತನಾಗಿ ತಕ್ಕಡಿ ತೂಗುವಾಗಲೂ ಪರಮ ಗುರುದರ್ಶನದ ಕಾತರ – ಕಂಪನ ! ನಿರಂತರ ಅರ್ಚನೆ, ನಿಜದ ಅನುಸಂಧಾನದಲ್ಲೂ ಗುರುಕರುಣೆಯ ಅನುರಣನ. ಹಾಲಿನಂತಿರುವ ನೀರಿನ ಸೆಲೆ ಅವರ ಪಾದಸ್ಪರ್ಶದಿಂದ 'ಹಾಲವರ್ತಿ' ಯಾಯಿತು ! ಮಂಗನಾಯಕನ ಹಳ್ಳಿ ಅವರ ಶಿವಾನುಭವ ಬೋಧೆಯಿಂದ ಲಿಂಗನಾಯಕನ ಹಳ್ಳಿಯಾಯಿತು ! ಇಂಥವೇ ಹದುಳದ ನುಡಿತರಂಗ !

## ಗುರು-ಹಾಲವರ್ತಿ ಚೆನ್ನವೀರಸ್ವಾಮಿಗಳು:

ಸುಮಾರು ೧೭೭೮ರ ಕಾಲ : ಹರಪನಹಳ್ಳಿ ಅರಸು ಸೋಮಶೇಖರನ ಕಾಲದಲ್ಲಿ ಈ ಹಾಲವರ್ತಿ ಚೆನ್ನವೀರಸ್ವಾಮಿಗಳು ಅರಸು ಮನೆತನದ ಮೇಲೆ ಧಾರ್ಮಿಕ ಪ್ರಭಾವ ಬೀರಿದ ಶಿವಯೋಗಿಗಳೆಂದು ತಿಳಿಯುತ್ತದೆ. ಬಸವಲಿಂಗ ಶರಣರ ಒಂದು ಚೌಪದದಲ್ಲಿ ಹರಪನಳ್ಳಿ ಅರಸು ಸೋಮಶೇಖರ ನರೇಂದ್ರನ ಹೆಸರು ಸೂಚಿತವಾಗಿದೆ.[೧] ಈ ಸೋಮಶೇಖರ ದೊರೆ ಮುಮ್ಮಡಿ ಬಸಪ್ಪನಾಯಕರ ಮಗ.

ಹರಪನಹಳ್ಳಿ. ಬಾಗಳಿ ಪ್ರದೇಶಕ್ಕೆ ದೊರೆಯಾಗಿದ್ದ ಸೋಮಶೇಖರನ ಕಾಲ. ಚೆನ್ನವೀರಸ್ವಾಮಿಗಳು[೨] ಹರಪನಹಳ್ಳಿ ಸಮೀಪದ ಗೋಸಾಮಿಗುಡ್ಡದ ಒತ್ತಿಗೆ ಇರುವ ಅರಣ್ಯದಲ್ಲಿ ಒಂದು ಸಣ್ಣ ಆಶ್ರಮದಂತಿದ್ದ ಮಠದ ನಿವಾಸಿಗಳು. ಬದಿಯಲ್ಲಿಯೇ ಇದ್ದ ಬಾವಿ ಈ ಸ್ವಾಮಿಗಳ ಪೂಜಾಪ್ರಭಾವದಿಂದ ಸದಾ ತುಂಬಿದ್ದು. ನೀರು ಹಾಲಿನಂತೆಯೇ ಆಯಿತಂತೆ. ಇವರ ಲಿಂಗಪೂಜಾ ನಿಷ್ಠೆ, ಶಿವಯೋಗ ಮಹಿಮೆಯ ಸಂಗತಿಗಳು ಸೋಮಶೇಖರನರೇಂದ್ರ ಮತ್ತು ಆತನ ಅರಸಿ ಬಸವಮ್ಮಾಜಿ ಅವರಿಗೆ ತಿಳಿದು ಅವರು ಚೆನ್ನವೀರಸ್ವಾಮಿಗಳಲ್ಲಿಗೆ ಬಂದು ದರ್ಶನ ಪಡೆದರು. ಸಾಮಾನ್ಯವಾದ ಗುಂಡವನೀರು ಬತ್ತದಸೆಲೆಯಿಂದ

---

೧. ವೈಲಾರದ ಶ್ರೀ ಬಸವಲಿಂಗ ಶರಣರ ಕೃತಿ, ಸಂ. ಪ್ರೊ. ಬಿ.ಶಿ. ಬಸವನಾಳ ಕಾಲ ಪು. ೮ ಮಲ್ಲಾಬಾದಿ ವೀರಭದ್ರಪ್ಪ

೨. ಮಲೆನಾಡ ಕಡೆಯಿಂದ ಬಂದವರೆಂದು ಪ್ರತೀತಿ

ಕೂಡಿ 'ಹಾಲವರ್ತಿ'ಯಾದುದು ಈ ಸ್ವಾಮಿಗಳ ಶಿವಯೋಗ ಶಕ್ತಿಯ ಪ್ರಭಾವದಿಂದಲೇ ಎಂದು ಅರಿತ ಜನ ಅರಸರ ನೆರವು ಪಡೆದು ಆ ಸ್ಥಳದಲ್ಲಿ ಒಂದು ಮಠ ನಿರ್ಮಿಸಿದರು. ನಿತ್ಯ ಪೂಜೆಗೆ ನೂರಾರು ಭಕ್ತರು ಬರತೊಡಗಿದಾಗ ಚೆನ್ನವೀರ ಶಿವಯೋಗಿಗಳ ಭಕ್ತಿ ಜ್ಞಾನಗಳ ಬೋಧೆಯ ಪ್ರಭಾವಕ್ಕೆ ಒಳಗಾಗಿ ಸತ್ಯಸದಾಚಾರ ಧರ್ಮಾಚರಣೆಗಳಲ್ಲಿ ಅವರಿಂದ ಮಾರ್ಗದರ್ಶನ ಹೊಂದಿ ಪುನೀತರಾದರು. ಅಂದಿನಿಂದ ಈ ಶಿವಯೋಗಿಗಳಿಗೆ 'ಹಾಲವರ್ತಿ ವಿರಕ್ತಮಠದ ಚೆನ್ನವೀರ ಶಿವಯೋಗಿ' ಎಂದು ಜನ ಕರೆಯತೊಡಗಿದರು.

ಶಿವಯೋಗ ಸಿದ್ಧಿಪುರುಷರಾದ ಶ್ರೀ ಚೆನ್ನವೀರ ಶಿವಯೋಗಿಗಳು ಭಕ್ತರ ಕೋರಿಕೆಯಂತೆ ಅಲ್ಲಲ್ಲಿ ಸಂಚರಿಸಿ, ಧರ್ಮಬೋಧೆ ಮಾಡುತ್ತ ಯಾರ ಹಂಗಿಗೂ ಒಳಗಾಗದೆ 'ಹಾಳುಗುಡಿ' ಯಿರಲಿ, 'ಬೀಳು ಮಂಟಪ'ವಿರಲಿ ಅಲ್ಲಿಯೇ ಇದ್ದು ಕಡುವಿರಕ್ತಿಯಿಂದ ಭಕ್ತವೃಂದವಿರುವಲ್ಲಿ ಒಂದು ಅಥವಾ ಎರಡು ದಿನ ವಾಸವಾಗಿರುತ್ತ ಕಲ್ಲಹಳ್ಳಿಗೆ ದಯಮಾಡಿಸಿದರು. ಕಲ್ಲಹಳ್ಳಿಯ ಸಮಸ್ತ ದೈವದವರು ಚೆನ್ನವೀರಸ್ವಾಮಿಗಳ ಧರ್ಮೋಪದೇಶದಿಂದ ಪ್ರಭಾವಿತರಾಗಿ ಅನನ್ಯಭಕ್ತಿಯಿಂದ ಅವರನ್ನು ಪೂಜಿಸಿದರು. ಈ ಹಳ್ಳಿಯ ಜನರ ಮುಗ್ಧ ಭಕ್ತಿಗೆ ಒಲಿದು ಚೆನ್ನವೀರ ಸ್ವಾಮಿಗಳು ಕೆಲಕಾಲ ಅಲ್ಲಿಯೇ ವಾಸವಾಗಿದ್ದರು. ಸುತ್ತ ಮುತ್ತಲಿನ ಹಳ್ಳಿಯ ಭಕ್ತಾದಿಗಳು ಬಂದು ಕಲ್ಲಹಳ್ಳಿಯಲ್ಲಿ ಜರುಗುತ್ತಿದ್ದ ಚೆನ್ನವೀರಸ್ವಾಮಿಗಳ ದಿವ್ಯಬೋಧೆಯನ್ನು ಕೇಳಿ ಪುನೀತರಾಗಿ ತಮ್ಮಲ್ಲಿಯೂ ಬರಬೇಕೆಂದು ಕೇಳಿಕೊಂಡರು.

ವನ ಅಪ್ಪಣೆ ಆದಾಗ ಬರುತ್ತೇವೆ' ಎಂದ ಅವರ ಮಾತು
ಂತ್ರದಂತಾಗಿ ನೆರೆಯ ಗ್ರಾಮ ಮಂಗನಾಯಕನ ಹಳ್ಳಿಯ
ನ ಇವರ ಬರವನ್ನೇ ನಿರೀಕ್ಷಿಸಿತು.

ಹೀಗೇ ಒಂದು ದಿನ ಕಲ್ಲಿಹಳ್ಳಿಯಿಂದ ಹೊರಟ ಶಿವಯೋಗಿ
ು. ಪರಮ ಪ್ರಾಣಮಿತದ ಅಯ್ಯನವರ ಭಕ್ತಿಪೂರ್ವಕ
ೀರಿಕೆಯನ್ನು ಮನ್ನಿಸಿ, ಮಂಜುಳ ತರಂಗದ ತುಂಗಾನದಿಯ
ಟಿನಲ್ಲಿರುವ ಮಂಗನಾಯಕನ ಹಳ್ಳಿಯ ಹತ್ತಿರದ ಅರಣ್ಯದ
ಶಾಂತ ಪ್ರದೇಶದಲ್ಲಿ ಬಂದು, ನದಿಯಲ್ಲಿ ಮಿಂದು ಲಿಂಗಪೂಜೆ
ಲ್ಲಿ ನಿರತರಾದರು. ಮಂಗನಾಯಕನಹಳ್ಳಿಯ ಜನತೆ
ದು ಊರಲ್ಲಿ ನೆಲೆಸಲು ಕೋರಿದರು! 'ಇದೂ ಊರೇ.
ಂಗಾರ್ಚನೆಯ ಮಹದಾನಂದವನ್ನು ಕೊಡುವ ಇದೂ ನಿಮ್ಮ
ರಿನ ಭಾಗವೇ' ಎಂದು ಅಪ್ಪಣೆ ಕೊಡಿಸಿದರು. ಜನರೆಲ್ಲ
ಡಿ ಅಲ್ಲಿಯೇ ಒಂದು ಭವ್ಯವಾದ ಮಠವನ್ನು ಕಟ್ಟಿದರು.
ದಿನಿಂದ 'ಮಂಗನಾಯಕನ ಹಳ್ಳಿ' 'ಲಿಂಗನಾಯಕನ ಹಳ್ಳಿ'
ಾಯಿತು.

ಲಿಂಗನಾಯಕನಹಳ್ಳಿಗೆ ಚೆನ್ನವೀರ ಶಿವಯೋಗಿಗಳು ಬಂದ
ರ್ತೆ. ಗುರುವಿಗಾಗಿ ಹಂಬಲಿಸುತ್ತಿದ್ದ ಬಸವಪ್ಪಸೆಟ್ಟರಿಗೆ ಒಂದು
ೀಪ್ರೇರಣೆಯಾಗಿ ತೋರಿತು. 'ಇವರೇ ನನ್ನ ಪರಮ
ರು' ಎನ್ನುವ ಅಂತರಂಗದ ಅನಿಸಿಕೆ. ತಕ್ಷಣ ಮೈಲಾರ
ದ ಲಿಂಗನಾಯಕನಹಳ್ಳಿಗೆ ಬಸವಪ್ಪಸೆಟ್ಟರು ಧಾವಿಸಿದರು.

ಲಿಂಗನಾಯಕನಹಳ್ಳಿಗೆ ಬಂದಾಗ ಕತ್ತಲು ಕರಗಿ ಮಂಗಳ
ಗು. ಪರಿಮಳದ ತೋಟ: ಮಠದ ಆವರಣದಲ್ಲಿ ಕಾಲಿಡು

ತ್ತಿರುವಂತೆ ಗಂಟಾನಾದ; ಲಿಂಗಾನುಷ್ಠಾನದ ಓಕಾಂರ ತರಂಗಿಣಿ. ಬಸಪ್ಪಸೆಟ್ಟರಿಗೆ ನಿಂತಲ್ಲಿಯೇ ಕರಗಿ ಹೋದ ಅನುಭವ. ಈ ಮುಂಚೆ ಎಂದೂ ಆಗದ ಅನಿರ್ವಚನೀಯ ಆನಂದ. ಪರ ವಶತೆಯಲ್ಲಿ ಮುಚ್ಚಿದ ಕಣ್ಣು ತೆರೆದಾಗ ಎದುರಿಗೇ ನಿಂತ ಭವ್ಯ ಜಂಗಮಮೂರ್ತಿ ! ಪಾದಕ್ಕೆರಗಿದ ಭಕ್ತನನ್ನು ಮೈದಡವಿದರು ಚೆನ್ನವೀರ ಶಿವಯೋಗಿಗಳು.

ಬಸವಪ್ಪನವರು 'ತಾಯನಗಲಿದ ಕರು ನಾನು. ನಿನ್ನ ಪಾದ ಸನ್ನಿಧಿಯನ್ನು ಕರುಣಿಸು. ನೀನೇ ನನಗೆ ಆಸರೆ. ತಂದೆ ತಾಯಿ ಬಂಧು ಬಳಗ. ಗುರುವೆ ನೀ ಎನಗೆ ಕೃಪೆಯಾಗು' ಅಂದರು.

ಹಸನ್ಮುಖಿಗಳಾದ ಚೆನ್ನವೀರಸ್ವಾಮಿಗಳು

'ಅಪ್ಪಾ, ನೀನು ಅನುಭಾವಿಯೇ ಆಗಿರುವಿ. ನಿನ್ನ ಅರಿವೇ ನಿನಗೆ ಗುರು !

'ಸ್ವಾನುಭಾವದ ನೆಲೆಯ ನಾನೇನು ಬಲ್ಲೆನೈ
ನೀನೆ ಒಳಪೊಕ್ಕು ಎನ ನುಡಿಸಿದೊಡವನೆ
ನಾ ನುಡಿವೆ ಗುರುವೆ ಕೃಪೆಯಾಗು' ಎಂದು ಅನನ್ಯಭಕ್ತಿಯಿಂದ ನುಡಿದ ಮಾತಿಗೆ ಗುರುಗಳ ಮನಸ್ಸು ಮರುಗಿತು: ಕರಗಿತು.

'ಅಪ್ಪಾ, ನಿನ್ನ ಅಭಿಲಾಷೆ ಏನು' ಎಂದು ಕೇಳಿದರು.

ಅದಕ್ಕೆ ಬಸವಪ್ಪಸೆಟ್ಟರು

'ಹಲವು ಮಾತೇನು ನೀನೊಲಿದುಪಾದವನಿಟ್ಟ

ನೆಲವೇ ಸುಕ್ಷೇತ್ರ, ಜಲವೆ ಪಾವನತೀರ್ಥ. ಅದ್ದ ರಿಂದ ತಮ್ಮ ಪಾದಸನ್ನಿಧಿಯಲ್ಲಿಯೇ ಇದ್ದು ದಿವ್ಯಬೋಧೆಯನ್ನು ಪಡೆಯುವಂತೆ ಕರುಣಿಸಬೇಕು' ಎಂದರು. ಅದಕ್ಕೆಗುರುಗಳು.

'ಬಸವಾ ಬಾ' ಎಂದು ಅನುಗ್ರಹಿಸಿ ಕರೆದರು. (ಹೀಗೆ ಪ್ರಥಮ ದರ್ಶನದಲ್ಲಿಯೇ ಗುರುವಿನ ಅನುಗ್ರಹಕ್ಕೆ ಪಾತ್ರರಾದ ಬಸವಪ್ಪಸೆಟ್ಟರು 'ಬಸವಲಿಂಗ' ಶರಣರಾದರು. ಗುರುಕರುಣೆ ಯನ್ನು ಹೊಂದಿದ ಬಸಪ್ಪಸೆಟ್ಟರು ತಮ್ಮ ಗುರುಗಳ ಸೇವೆ ಯಲ್ಲಿ ನಿರತರಾದರು. ತಮ್ಮ ವ್ಯವಹಾರವನ್ನು ಮರೆತು, ಗುರುವಾಕ್ಯ ಪ್ರಭಾವದಿಂದ ಲಿಂಗಾನುಸಂಧಾನದಲ್ಲಿ ಮೈಮರೆ ತರು. ಐದು ಮೈಲು ದೂರದ ಮೈಲಾರವನ್ನು ಬಿಟ್ಟು ಲಿಂಗ ನಾಯಕನಹಳ್ಳಿಗೆ] ಬಂದು ಚೆನ್ನವೀರಸ್ವಾಮಿಗಳ ಸನ್ನಿಧಿಯಲ್ಲಿಯೇ ಉಳಿದರು. ನಿತ್ಯ ಗುರುಶಿಷ್ಯರ ಶಿವಾನುಭವ ಗೋಷ್ಠಿ ನಡೆಯು ತ್ತಿತ್ತು. ಇವರ ಮಾತು ಕೇಳುವುದೆಂದರೆ ಭಕ್ತಾದಿಗಳಿಗೆ ಒಂದು ಅಪೂರ್ವ ಅನುಭವ – ಅಚ್ಚರಿ.

### ಬಸವಪ್ಪ-ಬಸವಲಿಂಗ ಶರಣರಾದುದು:

ಲಿಂಗನಾಯಕನಹಳ್ಳಿಯ ಬಿದಿಯ ಮಠದಲ್ಲಿದ್ದ ಈ ಗುರು ಶಿಷ್ಯರ ಶಿವಾನುಭವಗೋಷ್ಠಿಯ ಪ್ರಭಾವದಿಂದಾಗಿ ಅನೇಕ

ಅನುಭಾವಿಗಳು. ತತ್ವ್ವನಿಷ್ಠರು ಈ ಮಠಕ್ಕೆ ಬಂದು ಕೂಡಿದರು. ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು. ಬನ್ನಿಮಟ್ಟಿ ಚೆನ್ನಬಸಪ್ಪ. ಮೈಸೂರು ಪ್ರಾಂತದಿಂದ ಶಿವಬಸವ ಸ್ವಾಮಿಗಳು ಹೀಗೆ ಇನ್ನೂ ಅನೇಕ ಹರಗುರುಚರಮೂರ್ತಿಗಳು ಚೆನ್ನವೀರ ಶಿವಯೋಗಿಗಳ ಅನುಭವಾಮೃತ ಕೇಳಲು ಶ್ರೀಮಠದಲ್ಲಿ ನೆಲೆಸಿದರು.

ಬಸಪ್ಪ ಅನೇಕ ಸಲ ಗುರುವಿನ ಆಗ್ರಹ ನಿಷ್ಠುರ ಪರೀಕ್ಷೆಗೆ ಒಳಗಾಗಬೇಕಾಗುತ್ತಿತ್ತು. ಚೆನ್ನವೀರಸ್ವಾಮಿಗಳು ಹೀಗೆ ಬಂದು ಸೇರಿದ ಮೂರ್ತಿಗಳಲ್ಲಿ ಒಬ್ಬ ಶಿಷ್ಯನನ್ನು ತಮ್ಮ ಬಳಿಕ ಹಾಲವರ್ತಿ ಮಠದ ಅಧಿಪತಿಯೆಂದು ಆಯ್ದುಕೊಂಡರು. ಆ ಶಿಷ್ಯನಿಗೆ ಕಬ್ಬಕ್ಕು ಕಡಿದುದರಿಂದ ಒಂದು ಬೆರಳು ಕಪ್ಪಾಗಿ ಊನ ವಾಗಿತ್ತು. ತಮ್ಮ ಗುರುಗಳ ಈ ಆಯ್ಕೆ ಸರಿಯಲ್ಲ ಎಂದು ತೋರಿದ ಬಸಪ್ಪ – 'ಬುದ್ಧಿ. ಅಂಗಹೀನವಾದವನನ್ನು ಸ್ವಾಮಿ ಯಾಗಿ ನಿಯಮಿಸುವುದು ಒಳ್ಳೆಯ ಲಕ್ಷಣ ಅಲ್ಲ: ಇದರಿಂದ ಮಠಕ್ಕೆ ಶ್ರೇಯಸ್ಸು ಬಂದೀತೆ?' ಎಂದು ಸಂದೇಹ ವ್ಯಕ್ತ ಪಡಿಸಿದ. ಆದಕ್ಕೆ ಚೆನ್ನವೀರಸ್ವಾಮಿಗಳು 'ನೀನು ಬಸವಪ್ಪ ಅಲ್ಲ ಮುಸಿಯಪ್ಪ' ಎಂದು ಗುಡುಗಿದರು. ತಕ್ಷಣ ಬಸಪ್ಪನ ಮುಖ ಮುಸಿಯನ ಮುಖದಂತೆ ಕಪ್ಪಾಗಿ ಡೊಂಕಾಯಿತಂತೆ.

ಗುರುಗಳ ಕ್ರಿಯಾಚರಣೆ. ನಿರ್ಧಾರಗಳನ್ನು ಕುರಿತು ಸಂಶಯ ತಾಳುವುದು ಗುರುನಿಂದೆಯೇ ಎಂದು ಅರಿತು ಪಶ್ಚಾ ತ್ತಾಪದಲ್ಲಿ ಬೆಂದ ಬಸಪ್ಪನವರು ಒಂದು ವಾರದವರೆಗೂ ಗುರು

ಗಳಿಗೆ ಮುಖ ತೋರಿಸುವ ಧೈರ್ಯ ಮಾಡಲಿಲ್ಲ. ಕೊನೆಗೆ ಒಂದು ಸೋಮವಾರ ಪ್ರಾತಃಕಾಲದಲ್ಲಿ ಗುರುಗಳ ಪೂಜಾ ಕೋಣೆಯ ತಲೆಬಾಗಿಲಿಗೆ ಬಂದು ಬಂಟಿಗಾಲಲ್ಲೇ ನಿಂತು ಪರಿಪರಿಯಾಗಿ ತಮ್ಮ ಮನದ ಅಳಲನ್ನು ತೋಡಿಕೊಳ್ಳುತ್ತ :

'ಎರವ ಮಾಡದೆ ನಿಮ್ಮ ಗುರುಪುತ್ರರೊಳಗೆನ್ನ
ಕಿರಿಯ ಮಗನೆಂದು ಗುರುವೆ ನೀ ಕರಪಿಡಿದು
ಪರುಷದಿಂದೆನಗೆ ಕೃಪೆಯಾಗು'
'ಎಲ್ಲ ದೈವಕೆ ನಿಮ್ಮ ಮೆಲ್ಲಡಿಯೆ ಘನವೆಂದು
ಸೊಲ್ಲಿಗೊಮ್ಮೆಮ್ಮೆ ನುತಿಪೆನಾಂ ಗುರುರಾಯ
ಸಲ್ಲೀಲೆಯಿಂದೆ ಕೃಪೆಯಾಗು'

ಎಂದು ಮುಂತಾಗಿ ನೂರಾರು ಪದ್ಯಗಳಲ್ಲಿ ಗುರುಕರುಣೆಗಾಗಿ ಹಂಬಲಿಸಿದರು; ಗುರುಕೃಪೆ ಕೋರಿದರು. ಚೆನ್ನವೀರ ಶಿವಯೋಗಿಗಳ ಹೃದಯಕರಗಿ. ಶಿಷ್ಯ ಬಸಪ್ಪನನ್ನು ಮೈದಡವಿ ಸಮಾಧಾನಪಡಿಸಿ ಕೈಹಿಡಿದು ಒಳಕ್ಕೆ ಕರೆದೊಯ್ದು ಕುಳ್ಳಿರಿಸಿದರು. ಅಷ್ಟಾದರೂ ಗುರುವನ್ನು ತಲೆಯೆತ್ತಿ ನೋಡದಿದ್ದ ಶಿಷ್ಯನ ಮೇಲೆ ವಾತ್ಸಲ್ಯ ಉಕ್ಕಿದ ಗುರುಗಳು 'ಬಸಪ್ಪ' ಎಂದು ಮೃದುವಾಗಿ ಕರೆದರು. ಬಸಪ್ಪನ ಕಂಗಳಲ್ಲಿ ಅಶ್ರುಧಾರೆ. ಗುರುಗಳ ಪರುಷದೃಷ್ಟಿಯಿಂದಾಗಿ ಬಸಪ್ಪನ ಮುಖ ಮತ್ತೆ ಮೊದಲಿನಂತೆ ಕಳೆಗಟ್ಟಿತು. 'ಬಸವಲಿಂಗ' ಎಂದು ಕರೆದರು. ಬಸಪ್ಪನವರು ಹಾಗೇ ತನ್ಮಯರಾಗಿ ಕುಳಿತು ನೂರಾರು ತ್ರಿಪದಿಗಳಲ್ಲಿ ಗುರುವಿನ ಹಿರಿಮೆ ಕೊಂಡಾಡಿದರು – ಬರೆದರು. ಅಂದಿ

ನಿಂದ ಅವರನ್ನು ಎಲ್ಲರೂ 'ಬಸವಲಿಂಗ ಶರಣರು' ಎಂದೇ ಕರೆಯುತ್ತಿದ್ದರು.

ಗುರುಕರುಣೆಯನ್ನು ಹೊಂದಿದ ಬಸವಲಿಂಗ ಶರಣರು ತಮ್ಮ ಗುರುಗಳಿಗಿದ್ದ ಅದ್ಭುತ ಪವಾಡಶಕ್ತಿಯನ್ನು ಪ್ರತ್ಯಕ್ಷವಾಗಿ ನೋಡುವಂಥ ಘಟನೆಯೊಂದು ನಡೆಯಿತು. ಶಿವಾನುಭವ ಶಾಸ್ತ್ರದ ತರಬೇತಿಯನ್ನು ಹೊಂದುವುದಕ್ಕಾಗಿ ಹಾಲವರ್ತಿ ಮಠಕ್ಕೆ ಸೇರಿದ ಹರಗುರು ಚರಮೂರ್ತಿಗಳು ಒಂದು ದಿನ ಶಿವಾನುಭವ ಗೋಷ್ಠಿ ಮುಗಿದ ಬಳಿಕ ಚೆನ್ನವೀರಸ್ವಾಮಿಗಳನ್ನು ಕುರಿತು 'ಬುದ್ಧಿ. ಎಲ್ಲರಿಗೂ ಹಂಪಿಯ ವಿರೂಪಾಕ್ಷಸ್ವಾಮಿಯ ಜಾತ್ರೆಯನ್ನು ನೋಡಬೇಕು; ಸ್ವಾಮಿಯ ದರ್ಶನ ಪಡೆಯಬೇಕು ಅನ್ನೋ ಆಸೆ. ಈ ಸಲದ ಜಾತ್ರೆಗೆ ಹೋಗಿ ಬರೋಣ' ಅಂದರು.

'ಆಗಲಿ. ಅದಕ್ಕೇನಂತೆ. ಜಾತ್ರೆ ಇನ್ನೂ ಎಷ್ಟುದಿನ ?

'ಬುದ್ಧೀ. ದವನದ ಹುಣ್ಣಿಮೆಗೇ ಜಾತ್ರೆ – ಇನ್ನು ಎಂಟೇ ದಿನ !

'ಆಯಿತು' ಎಂದು ಮೌನ ತಾಳಿದರು.

ಲಿಂಗನಾಯಕನಹಳ್ಳಿಗೂ ಹಂಪೆಗೂ ಸುಮಾರು ೮೦ ಮೈಲು. ಬಿಟ್ಟೂಬಿಡದೆ ನಡೆದರೂ ೨ ದಿನ ಬೇಕು. ದಿನಗಳು ಹೀಗೆ ಉರುಳಿದುವು. ಶಿಷ್ಯರು ಧೈರ್ಯದಿಂದ ಗುರುಗಳ ಹತ್ತಿರ ಹೋಗಿ 'ಬುದ್ಧಿ ನಾಳೆಯೇ ಜಾತ್ರೆ' ಅಂದರು. ಅದಕ್ಕೆ

ಅವರು 'ಹೂಂ' ಎಂದು ಸುಮ್ಮನಾದರು. ಗುರುಗಳು ಜಾತ್ರೆಗೆ ಹೊರಡುವ ಲಕ್ಷಣ ಕಾಣಲಿಲ್ಲ. ಆ ದಿನವೂ ಕಳೆಯಿತು. ಮತ್ತೆ ಮಾರನೆಯ ದಿನ ಶಿಷ್ಯರು ಗುರುಗಳನ್ನು ಕಂಡು

'ಬುದ್ಧೀ ಇಂದೇ ಜಾತ್ರೆ' ಅಂದರು.
'ಹಾಗೇನು ? ಅಂದರೆ ಈಗ'
'ಈಗ ತೇರು ಸಾಗಿರಬಹುದು ಬುದ್ಧಿ'

'ಅರೆರೆ... ಬರ್ರಿ ಬರ್ರಿ. ಎಲ್ಲರೂ ಮಠದ ಮಾಳಿಗಿ ಏರಿರಿ' ಅಪ್ಪಗೆಯ ಸಪ್ಪಳ. ಗಂಭೀರ ಶೀಘ್ರಗತಿಯ ಹೆಜ್ಜೆ. ಎಲ್ಲರೂ ಮಾಳಿಗೆ ಏರಿದರು. ಎಲ್ಲರಿಗಿಂತ ಮುಂಚೆಯೇ ಮಾಳಿಗೆ ಏರಿ ನಿಂತ ಚೆನ್ನವೀರ ಶಿವಯೋಗಿಗಳು ತಮ್ಮ ಹೆಗಲ ಮೇಲಿದ್ದ ಕಾವಿ ಶಲ್ಲೆ ತೆಗೆದು ಬೀಸಿ 'ಅಗಾ ನೋಡ್ರಿ. ತೇರು, ಸ್ವಾಮಿ ದರ್ಶನ ಪಡೀರಿ' ಅಂದರು.. ಎಲ್ಲರೂ ಕಣ್ಣು ಮಿಟುಕಿಸದೇ ನೋಡುತ್ತಿದ್ದಾರೆ 'ಹರಹರ ಮಹಾದೇವ' ಜಯಜಯಕಾರ ಧ್ವನಿ – ವಿರೂಪಾಕ್ಷಸ್ವಾಮಿಯ ತೇರು ವೈಭವದಿಂದ ಸಾಗಿದೆ. ತೇರಿನ ಕಲಶದ ಪ್ರಕಾಶ ಲಕಲಕ ಹೊಳೆಯುತ್ತಿದೆ. ಉತ್ತತ್ತಿ, ಬೆಲ್ಲದಚ್ಚು ಬಾಳೆಹಣ್ಣು ತೂರುವ. ತೆಂಗು ಒಡೆಯುವ ಸದ್ದು: ವಾದ್ಯಮೇಳದ ಮಜಲು: ಗದ್ದಲ. ಬೀದಿ ಬೀದಿ ಅಂಗಡಿ ಸಾಲು ಹೀಗೆ ಜಾತ್ರೆಯ ಇಡೀ ಪರಿಸೆ ಕಣ್ಣಮುಂದೇ ಇದೆ. ಎಲ್ಲರಿಗೂ ಅದರ ಪ್ರತ್ಯಕ್ಷ ದರ್ಶನ – ಎಲ್ಲರೂ ಮೌನ: ಅದ್ಭುತ ಆಶ್ಚರ್ಯಗಳ ಅನುಭವ.

ಗುರುವಿನ ಮಹಾಮಹಿಮೆಯನ್ನು ಕಣ್ಣಾರೆ ಕಂಡ – ಬಸವಲಿಂಗ ಶರಣರು ಅದನ್ನು ತಮ್ಮ ಗುರುಕರುಣ ತ್ರಿವಿಧಿಯಲ್ಲಿ ಪರಿಪರಿಯಾಗಿ ಬಣ್ಣಿಸಿದ್ದಾರೆ. ಅವರ ತ್ರಿವಿಧಿಗಳಲ್ಲಿ ಬರುವ ಬೆಡಗು ಮುಂಡಿಗೆಗಳಿಗೆ ಇಂಥ ಗುರುವಿನ ಪ್ರೇರಣೆಯೇ ಕಾರಣವಾಗಿದೆ.

ವೀರಶೈವಧರ್ಮ ತತ್ತ್ವಗಳಲ್ಲಿ ಆಚರಣೆ ಪ್ರಧಾನಾಂಗವೆಂದರಿತ ಬಸವಲಿಂಗ ಶರಣರು ತಮ್ಮ ಕಟ್ಟುನಿಟ್ಟಾದ ಅವಧಾನದ ಕ್ರಿಯಾಚರಣೆಗಳಿಂದಾಗಿ ಸರ್ವರ ಗೌರವಕ್ಕೆ ಪಾತ್ರರಾಗಿದ್ದರು. ಬಸವಲಿಂಗ ಶರಣರಲ್ಲಿ ನಡೆನುಡಿಗಳ ಸಾಮರಸ್ಯವನ್ನು ಗುರುತಿಸಿದ ಚೆನ್ನವೀರಸ್ವಾಮಿಗಳು ಬೇರೆ ಬೇರೆ ಮಠದಿಂದ ಶಿವಾನುಭವಶಾಸ್ತ್ರ ಕಲಿಯಲು ಬಂದವರನ್ನು ಬಸವಲಿಂಗ ಶರಣರಿಗೆ ಒಪ್ಪಿಸುತ್ತಿದ್ದರು. ಕೆಲವೊಮ್ಮೆ ನಾವೆಲ್ಲ ತಿಳಿದವರೇ ಎಂದು ಭಾವಿಸಿಕೊಂಡು ಬಂದ ಕಾವಿಲಾಂಛನಧಾರಿಗಳನ್ನು ಕಂಡ ಬಸವಲಿಂಗ ಶರಣರು 'ಬುದ್ಧೀ, ವೀರಶೈವ ಶಾಸ್ತ್ರದ ಅಭ್ಯಾಸ ಎಷ್ಟು ಮಾಡಿದ್ದೀರಿ ? ಅಂಗ ಲಿಂಗಗಳ ಸಂಬಂಧವೇನು ? ಲಿಂಗಾಂಗ ಸಾಮರಸ್ಯವೆಂದರೇನು ? ವೇದಾಂತದ ಮತ್ತು ಶಿವಾನುಭವದ ರೀತಿ ಯಾವುದು ? ಗುರಿಯೇನು ?' – ಎಂದು ಮುಂತಾಗಿ ಪ್ರಶ್ನಿಸುತ್ತಿದ್ದರು. ಅವರ ಪ್ರಶ್ನೆಗೆ ಸರಿಯಾದ ವಿವರಣೆ ಬಂದರೆ ಸರಿ. ತಪ್ಪು ತಪ್ಪಾಗಿ ಉತ್ತರಿಸಿ. 'ಪ್ಯಾ ಪ್ಯಾ' ಮಾಡಿದರೆ ಬಸವಲಿಂಗ ಶರಣರು ಸುಮ್ಮನೆ ಬಿಡುತ್ತಿರಲಿಲ್ಲ. ಅವರ ಹತ್ತಿರ ತಾವೂ ಕುಳಿತು 'ಬುದ್ಧೀ. ಸ್ವಾಮಿಗಳಾಗಿ ಧರ್ಮ ಬೋಧೆ ಮಾಡೋದಕ್ಕೆ ಶಿಷ್ಯರ ಹತ್ತಿರ ಹೋಗುತ್ತೀರಿ. ಬುದ್ಧಿ ವುಳ್ಳವರು ಬಂದಿದ್ದಾರೆ ಎಂದು ಮುಗ್ಧ ಭಕ್ತರು ನಿಮ್ಮನ್ನು

ಪೂಜಿಸುತ್ತಾರೆ. ನಿಮ್ಮ ಪಾದೋದಕ ಪಡೆದುಕೊಳ್ಳುತ್ತಾರೆ. ಭಕ್ತಿಕಾಣಿಕೆ ಸಲ್ಲಿಸುತ್ತಾರೆ. ಲಾಂಛನಧಾರಿಗಳಾದ ನೀವು ಅವರಿಂದ ಕಾಣಿಕೆ ಸ್ವೀಕರಿಸುತ್ತೀರಿ. ಪ್ರತಿಯಾಗಿ ನೀವು ಏನು ಕೊಡುತ್ತೀರಿ? ಕಾವಿ ಲಾಂಛನ ಧರಿಸಿ ಜನರನ್ನು ವಂಚಿಸಿದರೆ ಶಿವ ಮೆಚ್ಚುವುದಿಲ್ಲ' ಎಂದು ಹೇಳಿ ಗುರುಗಳ ಅನುಮತಿ ಪಡೆದು ಆ ವ್ಯಕ್ತಿಗಳ ಕಾವಿ ಹೊದಿಕೆಗಳನ್ನು ತೆಗೆದಿರಿಸಿ ಸಾದಾ ಬಿಳಿ ಬಟ್ಟೆ ಧರಿಸಲು ಕೊಡುತ್ತಿದ್ದರು. ಗುರು ಚೆನ್ನವೀರೇಶನ ಸೇವೆಯಲ್ಲಿ ಕೆಲವು ಕಾಲ ಅವರನ್ನು ಇರಿಸಿಕೊಂಡು ಅವರಿಗೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಸೂಕ್ಷ್ಮ ಅರಿವು ಆಚರಣೆಗಳನ್ನು ವಿಧಿಗಳನ್ನು ತಿಳಿಸಿ ಪ್ರತ್ಯಕ್ಷವಾಗಿ ಮಾರ್ಗದರ್ಶನ ನೀಡುತ್ತಿದ್ದರು. ಕೆಲವು ತಿಂಗಳು ಕಳೆದ ಬಳಿಕ ಮತ್ತೆ ಅವರಿಗೆ ಪ್ರಶ್ನೆ ಹಾಕುವರು. ಅವರಿಂದ ಸಮರ್ಥವಾದ ಉತ್ತರ ಬಂದಾಗ,

'ಬುದ್ಧೀ, ನೀವು ಕಾವಿ ಧರಿಸಿರಿ. ಅದನ್ನು ನೀವು ಈಗ ಧರಿಸುವುದರಿಂದ ಅದಕ್ಕೂ ಕಿಮ್ಮತ್ತು ಬರುತ್ತದೆ. ಧರ್ಮ ಬೋಧೆ ಮಾಡುವ ಗುರುಗಳು ನೀವು. ಭಕ್ತರಲ್ಲಿ ನೀತಿ ಕ್ರಿಯಾಚರಣೆಗಳ ಬೋಧೆ ಮಾಡಿ ಅವರ ಉದ್ಧಾರ ಮಾಡಿರಿ' ಎಂದು ಅವರಿಗೆ ಭಕ್ತಿಯಿಂದ ನಮಸ್ಕರಿಸಿ, ಗುರುಗಳ ಶುಭಾಶೀರ್ವಾದ ಕೊಡಿಸಿ ಅವರನ್ನು ಬೀಳ್ಕೊಡುತ್ತಿದ್ದರು.

ಮಧ್ಯೆಮಧ್ಯೆ ಬಿಡುವು ಮಾಡಿಕೊಂಡು, ಗುರುಗಳ ಅನುಮತಿ ಪಡೆದು ಚಿತ್ರದುರ್ಗ, ಡಂಬಳ–ಗದಗು, ಕೊಪ್ಪಳ ಮುಂತಾದ ಶ್ರೀಮಠಗಳಿಗೆ ಹೋಗಿ ಜಂಗಮಪುಂಗವರನ್ನು ಕಂಡು ಅವರ ಶುಭಾಶೀರ್ವಾದಗಳನ್ನು ಪಡೆದು ಮರಳುತ್ತಿದ್ದ

ಬಸವಲಿಂಗ ಶರಣರಿಗೆ ಒಂದು ದಿನ ದಿಗ್ಭ್ರಮೆ. ಗುರು ಚೆನ್ನ ವೀರಸ್ವಾಮಿಗಳು ಜೀವಂತಸಮಾಧಿ ಹೊಂದುವ ಸೂಚನೆ ನೀಡಿದರು. ಅಂದು ಬಸವಲಿಂಗರಿಗೆ ದಿಕ್ಕೇ ತೋಚದು. ಗುರು ವನ್ನು ಅಗಲಿದ ಬಳಿಕ 'ಇನ್ನೇನು ಎನ್ನುವ ವಿಕಳತೆ ಕಳವಳ. ಯಾರಿಗೂ ತೋರಗೊಡುವಂತೆಯೂ ಇಲ್ಲ: ಅದು ಶಿವಾನು ಭವದ ಅರಿವಿಗೆ ಆಚಾರಕ್ಕೆ ಸಲ್ಲದು ಎಂದು ಅರಿತು ಮತ್ತೆ ಎಂದಿನಂತೆ ಸಹಜಾಚರಣೆಯಲ್ಲಿ ತೊಡಗಿದರು.

ಹೊಳಗುಂದಿ ಮಠದ ಚರಂತಪ್ಪನವರು ಯಜಮಾನ ಸಿದ್ದನಗೌಡರು ಮುಂತಾದವರು ಕೂಡಿ ಗುರುಗಳ ಇಚ್ಛೆಯ ಮೇರೆಗೆ ಲಿಂಗನಾಯಕನ ಹಳ್ಳಿಯ ಮಠದ ಆವರಣದಲ್ಲಿ ಒಂದು ಸಮಾಧಿ ಸಿದ್ಧಪಡಿಸಿದರು. ಅಂತರ್ಮುಖಿಗಳಾದ ಚೆನ್ನವೀರ ಶಿವಯೋಗಿಗಳು ಸದಾ ಲಿಂಗಾನುಸಂಧಾನದ ತನ್ಮಯತೆಯಲ್ಲಿಯೇ ಇರುತ್ತಿದ್ದುದನ್ನು ಕಂಡ ಬಸವಲಿಂಗ ಶರಣರಿಗೆ ನೆಲವೆಲ್ಲ ಗಾಳಿಯಂತೆ ಬೀಸಿದ ಅನುಭವ. ಅಂದು ಒಂದು ದಿನ ಎಲ್ಲರನ್ನು ಕರೆದ ಚೆನ್ನವೀರೇಶರು,

'ಈ ಘಟ ಬಯಲಾಗುವ ಗಳಿಗೆ ಬಂದಿದೆ. ನಾವು ಲಿಂಗಪೂಜೆಯಲ್ಲಿಯೇ ಸಮಾಧಿಯಲ್ಲಿ ಸೇರುತ್ತೇವೆ. ಬಳಿಕ ಗದ್ದುಗೆ ಅಥವಾ ಲಿಂಗಪ್ರತಿಷ್ಠಾಪನೆ ಅದೆಲ್ಲ ಮಾಡಕೂಡದು. ಆದರೆ ಒಂದು ಮಾತು. ಮಲೆನಾಡ ಕಡೆಯಿಂದ ಮಂಚ. ಚಿತ್ತ, ಆವುಗೆ ಹೊಳೆಯಲ್ಲಿ ತೇಲಿಬರುತ್ತವೆ. ಅವುಗಳನ್ನು ಮಾತ್ರ ನೀವು ತೆಗೆದಿರಿಸಬೇಕು.' ಯಾರಿಗೂ ಏನೂ ಕೇಳಲು ಮಾತೇಬಾರದು. ಎಲ್ಲರೂ ನೋಡನೋಡುತ್ತಿರುವಂತೆ

ಚೆನ್ನವೀರ ಶಿವಯೋಗಿಗಳು ಗವಿಯಲ್ಲಿ ಇಳಿದುಹೋದರು. ಅವರು ಮೊದಲೇ ಕೊಟ್ಟ ಸೂಚನೆಯಂತೆ ಗವಿಯ ಬಾಯಿಗೆ ಉದ್ದ ಬಂಡೆಗಳ ದಬಾಸು ಹಾಕಿದರು.

ಚೆನ್ನವೀರ ಶಿವಯೋಗಿ. ಯಾವ ದಿನ ಲಿಂಗನಾಯಕನ ಹಳ್ಳಿಯ ಪಾಲವರ್ತಿ ಮಠದ ಗವಿಯಲ್ಲಿ 'ಜೀವಂತ ಸಮಾಧಿ' ಸೇರಿದರೋ. ಅಂದೇ ಸಾಯಂಕಾಲ ಲಿಂಗನಾಯಕನಹಳ್ಳಿಯಿಂದ ಸುಮಾರು ೪೦ ಮೈಲಿ ಅಂತರದ ಐರಣಿ ಮಠದಲ್ಲಿ ಪ್ರತ್ಯಕ್ಷ ರಾದರಂತೆ. ಐರಣಿ ಮಠದ ಸಮೀಪ ಅವರು ಬರುತ್ತಿ ದ್ದಂತೆಯೇ ಭಕ್ತ ಸಮೂಹ 'ಶಿವಯೋಗಿಗಳು ನಡೆದುಕೊಂಡೇ ಬಂದಿದ್ದಾರೆ! ಎಂದು ಆದರದಿಂದ ಕರೆದೊಯ್ದು ಪೂಜೆಗೆ ಅಣಿ ಮಾಡಿದರು. ಅಂದಿನಿಂದ ಹದಿನೈದು ದಿನಗಳವರೆಗೆ ಅಲ್ಲಿಯೇ ಶಿವಾನುಭವ ಪ್ರವಚನ ಮಾಡಿದ್ದು ಆ ಬಳಿಕ ಎಲ್ಲಿ ಹೋದರು, ಯಾರಿಗೂ ತಿಳಿಯಲಿಲ್ಲ.

ಈ ವಿಷಯ ಕೇಳಿ ತಿಳಿದ ಬಸವಲಿಂಗ ಶರಣರು. ಲಿಂಗ ನಾಯಕನಹಳ್ಳಿ. ಕಲ್ಲಹಳ್ಳಿ ಮುಂತಾದ ಭಾಗದ ಜನಕೂಡಿ ಐರಣಿಗೆ ಧಾವಿಸಿದರು. ಆದರೆ 'ಮರನೆಯ ಬೇರ ಕಿತ್ತೊಗೆಯಬಲ್ಲ ಗುರು ಚೆನ್ನವೀರೇಶ' 'ನಿರಘ ನಿರಂಜನ ನಿರವಯ ನಿತ್ಯ ಶ್ರೀ ಗುರು ಚೆನ್ನವೀರ' ಶಿವಯೋಗಿ ಬಯಲಾದ ಚೋದ್ಯವನ್ನು ಯಾರು ಬಲ್ಲರು ?

ಮುಂದೆ ಅದೇ ವರ್ಷದ ಶ್ರಾವಣ ಮಾಸದ ಒಂದುದಿನ ಶಿವಯೋಗಿಗಳು ಸೂಚಿಸಿದಂತೆ ಪಾಲವರ್ತಿ ಮಠದ ಪತ್ತಿರದ

ಹೊಳೆಯಲ್ಲಿ ಒಂದು ಮಂಚ, ಚಿತ್ತ ಮತ್ತು ಒಂದು ಜೊತೆ ಆವುಗೆಗಳು ತೇಲುತ್ತ ಬಂದುವು. ಗುರುಗಳ ಸೂಚನೆಯನ್ನು ಮನದಂದು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದ ಕೆಲವರು ಓಡೋಡಿ ಬಂದು ಈ ಸುದ್ದಿ ತಿಳಿಸಿದರು. ಭಕ್ತಾದಿಗಳು ಕೂಡಿಹೋಗಿ ಗುರುವಿನ ಆಶೀರ್ವಾದ ಸಂಕೇತ ವಸ್ತುಗಳನ್ನು ಎತ್ತಿಟ್ಟು ಪೂಜಿಸಿ ಭಜನೆಯ ಜೊತೆಗೆ ಮಠಕ್ಕೆ ತಂದು ಅವರ ಲಿಂಗಪೂಜಾ ಕೋಣೆಯಲ್ಲಿ ಹಾಸಿದ್ದ ಗದ್ದುಗೆಗಂಬಳಿಯ ಮೇಲಿರಿಸಿದರು. ಬಸವಲಿಂಗ ಶರಣರಿಗಂತೂ ಗುರುಗಳೇ ಪುನಃ ಮಠಕ್ಕೆ (ದಯ ಮಾಡಿಸಿದ) ಭಾವಾವೇಶ.

ಮತ್ತೊಮ್ಮೆ ಐರಣಿಗೆ ಹೋಗಿ. ಹಾಲವರ್ತಿಗೆ ಮರಳಿದ ಬಸವಲಿಂಗ ಶರಣರಿಗೆ, ಗುರುವಿಲ್ಲದ ಮಠ ಅರಿವಿಲ್ಲದ ಅಂಗ ದಂತೆ ಕಂಡಿತು. ಚಿಂತನಶೀಲರಾದ ಅವರ ಮನದಲ್ಲಿ ಅವಿರಳ ವಾಗಿ ತುಂಬಿದ ಗುರುಗಳ ಸ್ಮರಣೆ ಹೊಮ್ಮಿ, ಮಕ್ಕಳಂತೆ ಗಳ ಗಳನೆ ಅತ್ತುಬಿಟ್ಟರು. ಇಲ್ಲೇನು ? ಎಲ್ಲೇನು ? ಎಲ್ಲಿ ಯಾದರೂ ಸರಿ ಎಂದು ಮತ್ತೆ ಮೈಲಾರಕ್ಕೆ ಮರಳಿದರು. ಲೋಕದ ಕಣ್ಣಿಗೆ ಮರುಳಾಗಿ ಕಂಡ ಬಸವಲಿಂಗ ಶರಣರು ಅಂತ ರಂಗ ಪ್ರಪಂಚದಲ್ಲಿಯೇ ಉಳಿದರು. ಗುರುಧ್ಯಾನ. ಲಿಂಗಪೂಜೆ: ನಿರಾಳ ನಿರುಂಬಳ ಚಿತ್ತ. ತಮಗೆ ಹೊಳೆದ ಅನುಭಾವವನ್ನು ಬಿಡಿಹಾಡುಗಳಲ್ಲಿ, ಧಾರ್ಮಿಕ ಸೈದ್ಧಾಂತಿಕ ರಚನೆಗಳಲ್ಲಿ ನಿರೂಪಿ ಸುತ್ತ ಕೋರೀಕಾಗದದಲ್ಲಿ ಬರೆದಿಡುತ್ತಿದ್ದರು. ಮತ್ತೆಮತ್ತೆ ಪೂಜೆ, ಅನುಸಂಧಾನ.

ಹೀಗೆ ವೀರಶೈವ ಅನುಭಾವ ಸಾಹಿತ್ಯದ ಹಾಡುಗಬ್ಬದ ಪರಂಪರೆಗೆ ವಿಶಿಷ್ಟ ಸಂಪತ್ತನ್ನು ನೀಡಿದ ಬಸವಲಿಂಗ ಶರಣರು ಮೈಲಾರದಲ್ಲಿಯೇ ಸುಮಾರು ತಮ್ಮ ೬೦ನೆಯ ವಯಸ್ಸಿನಲ್ಲಿ ಕೊನೆಯುಸಿರೆಳೆದರು.

ಬಸವಲಿಂಗ ಶರಣರ ರಚನೆಗಳು ವೀರಶೈವಧರ್ಮದ ಸಿದ್ಧಾಂತವನ್ನು ಪ್ರತಿಪಾದಿಸುತ್ತವೆ. ಸ್ವಾನುಭಾವದ ನೆಲೆಗಟ್ಟಿನಿಂದ ಮೂಡಿ ಬಂದ ಇವರ ಬೇರೆ ಬೇರೆ ರಚನೆಗಳು ಕನ್ನಡ ಸಾಹಿತ್ಯದ ವಿವಿಧ ಛಂದಸ್ಸು ಮಟ್ಟುಗಳನ್ನು ಬಳಸಿಕೊಂಡು ಏನೊಮ್ಮೊ ಜಟಿಲವೆನಿಸಿದರೂ- ತುಂಬ ಜನಪ್ರಿಯವಾಗಿವೆ. ಅದರಲ್ಲೂ ವೀರಶೈವ ಧರ್ಮಾಚರಣೆಗೆ ಸಂಬಂಧಿಸಿದ ಅನೇಕ ಪ್ರಕ್ರಿಯೆಗಳಿಗೆ ಬಸವಲಿಂಗ ಶರಣರ ಕೃತಿಗಳು ಕೈದೀಪವಾಗಿವೆ. ಈ ದೃಷ್ಟಿಯಿಂದ ಇವು ವಿಶಿಷ್ಟ ಮತ್ತು ಮಹತ್ವದ ರಚನೆಗಳು. ಪ್ರೊ. ಬಸವನಾಳರು ಮೈಲಾರ ಬಸವಲಿಂಗ ಶರಣರ ಕೃತಿಗಳನ್ನು ಕುರಿತು 'ವೀರಶೈವದ ಶುದ್ಧ ನಡೆ ನುಡಿ. ಗೊತ್ತು - ಗುರಿಗಳ ಬಗೆಗೆ ಸರಿಯಾದ ತಿಳಿವಳಿಕೆಯನ್ನು ಕೊಡುವ ಗ್ರಂಥಗಳು ಕನ್ನಡದಲ್ಲಿ ವಿರಳವಾಗಿರುವುದರಿಂದ ಈ ಕೃತಿಗಳಿಗೆ ವೀರಶೈವ ಧಾರ್ಮಿಕ - ಸಾಹಿತ್ಯದಲ್ಲಿ ಒಳ್ಳೆಯ ಗಣ್ಯವಾದ ಸ್ಥಾನವಿದೆಯೆನ್ನಬಹುದು' ಎಂದು ಹೇಳಿದ ಮಾತು ಮನನೀಯವಾಗಿದೆ.

ಬಸವಲಿಂಗ ಶರಣರ ಕೃತಿಗಳು –[೧]ಮುಖ್ಯವಾಗಿ ಮೂರು

---

೧. ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು ಪ್ರಸ್ತಾವನೆ ಪುಟ ೧೬ ಸಂ. ಶಿ. ಶಿ. ಬಸವನಾಳ ೧೯೪೫

೧. ಷಟ್‌ಸ್ಥಲ ನಿರಾಭಾರಿ ವೀರಶೈವ ಸಿದ್ಧಾಂತ.
೨. ಗುರುಕರುಣ ತ್ರಿವಿಧಿ
೩. ಶಿವಾನುಭವದ ದರ್ಪಣ.

ಇದಲ್ಲದೆ ನಾಲ್ಕನೆಯ ಒಂದು ಚಿಕ್ಕ ಕೃತಿ, 'ಲಿಂಗಪೂಜಾ ವಿಧಾನ'.

## ೩. ಕೃತಿ ಪರಿಚಯ

### ೧. ಷಟ್‌ಸ್ಥಲ ನಿರಾಧಾರಿ ವೀರಶೈವ ಸಿದ್ಧಾಂತ:

ಈ ಕೃತಿ ವಾರ್ಧಕ ಷಟ್ಪದಿಯಲ್ಲಿದ್ದು ಇದರಲ್ಲಿ ಒಟ್ಟು ಮೂರು ಪ್ರಕರಣಗಳಿವೆ. ಮೊದಲನೆಯದು ವೀರಶೈವ ಧರ್ಮದ ನಿತ್ಯಾಚರಣೆಗೆ ಸಂಬಂಧಿಸಿದ ಪರಿಕರಗಳು: ಅಷ್ಟಾವರಣ: ಗುರು. ಲಿಂಗ. ಜಂಗಮ. ಪಾದೋದಕ. ಪ್ರಸಾದ. ವಿಭೂತಿ. ರುದ್ರಾಕ್ಷಿ, ಮಂತ್ರ.

**ಅಷ್ಟಾವರಣ:**

**ಗುರು** : ವೀರಶೈವನಾದವನು ಗುರುವಿನ ಹಿರಿಮೆಯನ್ನು ಅರಿತಿರಬೇಕು. ಗುರು. ಮರವೆ ಅಜ್ಞಾನದ ಕತ್ತಲೆಯನ್ನು ಕಳೆಯುವ ಸೂರ್ಯ. ಗುರುವೇ ಭಕ್ತರ ಪ್ರಾಣ. ಶಿಷ್ಯನನ್ನು ಸುಪುತ್ರನನ್ನಾಗಿ ಮಾಡಿಕೊಳ್ಳುತ್ತಾನೆ. ಆತನ ಮಸ್ತಕದ ಮೇಲೆ ಹಸ್ತವಿಟ್ಟು ಚಿತ್‌ಕಳೆಯನ್ನು ಇಷ್ಟರೂಪವಾಗಿ ಮಾರ್ಪಡಿಸುತ್ತಾನೆ. ಆದ್ದರಿಂದ ಹರನಿಗಿಂತ ಗುರು ಅಧಿಕ.

**ಲಿಂಗ** : ಅಂತರಂಗದ ಅರಿವು, ಸ್ವಸ್ವರೂಪದ ಜ್ಞಾನದ ಸಂಕೇತವಾಗಿ 'ಚಿಜ್ಯೋತಿ'ಯನ್ನು ಲಿಂಗವೆಂದು ಪರಿಭಾವಿಸಿ

ಅಂಗದ ಮೇಲೆ ಧರಿಸಿ, ಅಂಗ ಲಿಂಗ ಸಂಬಂಧ ಕಲ್ಪಿಸಿಕೊಳ್ಳು ವುದು ಅತ್ಯಗತ್ಯ. ಲಿಂಗದಲ್ಲಿಯೇ ಸಕಲವಿಶ್ವ ಹುದುಗಿದೆ. ಲಿಂಗವೇ ಪತಿ ಎಂದು, ತಾನು ಸತಿಯೆಂದು ಭಾವಿಸಿ ಅರ್ಚಿಸ ಬೇಕು.

**ಜಂಗಮ** : ಭಕ್ತನ ಚಿತ್‌ಕಳೆ ಜಂಗಮ: ಚರಲಿಂಗ. ಗುರು ಲಿಂಗವೆರಡರ ಪ್ರಾಣ. ಇಂಥ ಜಂಗಮ ತತ್ತ್ವದ ದಾಸೋಹಿ ಯಾದ ಭಕ್ತರೇ ಶ್ರೇಷ್ಠ.

**ಪಾದೋದಕ** : ಚರಲಿಂಗರೂಪನಾದ ಜಂಗಮದ ಚರಣ ದುಂಗುಟದಿಂದ ಬರುವುದು ಸುಜ್ಞಾನ ತೀರ್ಥ. ಅದು ಸತ್ಯೋದಕ. ಖಂಡಿತಾಚರಣೆಯಿಂದ ಲಿಂಗೋದಕವ ಮಾಡಿ ಸ್ವೀಕರಿಸಬೇಕು; ಸದ್‌ವರ್ತನೆಯಲ್ಲಿ ಆಚರಿಸಬೇಕು.

**ಪ್ರಸಾದ** : ಶುದ್ಧ ಪದಾರ್ಥಗಳನ್ನು ಗುರುಲಿಂಗ ಜಂಗ ಮಕ್ಕೆ ಅರ್ಪಿತಮಾಡಿ ಅಂಗಭೋಗದ ಉಪಭೋಗ ಎಂಬ ಭಾವನೆ ಕರಗಿ ಲಿಂಗಭೋಗ- ತಾನು ಲಿಂಗಸ್ವರೂಪಿ ಆದ್ದರಿಂದ ಕೈಕೊಂಬುದು ಲಿಂಗಭೋಗ - ಎಂದು ಸ್ವೀಕರಿಸುವುದು ಪ್ರಸಾದ- ಅವನು ಪ್ರಸಾದಿ. ಇದರಲ್ಲಿ ಶ್ರದ್ಧೆ ನಿಷ್ಠೆಗಳು ಮೂಡಬೇಕು. ಭಕ್ತಿಗೆ ಜನನ ಸ್ಥಾನ ಪ್ರಸಾದ.

**ವಿಭೂತಿ** : ಭಕ್ತರ ಅಂತರಂಗದ ಪ್ರಶಾಂತ ಚಿತ್‌ಪ್ರಕಾಶವೇ ಭಸ್ಮ, ಭಸ್ಮ ಮಂಗಲರೂಪು. ಅದನ್ನು ಧರಿಸುವವನು ಸದ್‌ಭಕ್ತ.

**ರುದ್ರಾಕ್ಷಿ** : ರುದ್ರಾಕ್ಷಿ ಚಿತ್ತದ ನಾದಮಯ ಗುರುರೂಪ. ಚಿದ್‌ಬಿಂದುಮಯ ಲಿಂಗ. ಗುರುವಿನ ಕಟಾಕ್ಷವಾಗಿ ರುದ್ರಾಕ್ಷಿ ಸರ. ಇವುಗಳನ್ನು ಧರಿಸುವ ಶರಣರಿಗೆ ಎಣೆಯಿಲ್ಲ.

**ಮಂತ್ರ** : ಪಂಚಾಕ್ಷರಿ ಮಂತ್ರವೆಂದರೆ ಅದು ಚಿದ್ರೂಪ ವಾದ ಇಷ್ಟಲಿಂಗದ ಹೆಸರಿನ ಪ್ರಣವ. ಪಂಚಭೂತಗಳ ಭೌತಿಕ ಸ್ವರೂಪವನ್ನು ಅತೀಂದ್ರಿಯರೂಪಕ್ಕೆ ತಿರುಗಿಸುವ ಸಾಧನ. ಚಾಂಚಲ್ಯ, ಮೋಸಗಳನ್ನು ಅತಿಗಳೆದು ನಿಷ್ಠೆ ಪ್ರೇಮಗಳನ್ನು ಬೆಳೆಸುತ್ತದೆ. ಇದು ಪರಮಪಾವನ - ಇದನ್ನು ಮೃದುವಾಗಿ ಅಂತರಂಗದಲ್ಲಿ ಉಚ್ಚರಿಸಬೇಕು.

ಬಸವಲಿಂಗ ಶರಣರ ಈ ಪ್ರಕರಣದಲ್ಲಿ ಬರುವ ಅಷ್ಟಾ ವರಣಕ್ಕೆ ಸಂಬಂಧಿಸಿದ ಸೂತ್ರಪ್ರಾಯವಾದ ಪಾದಗಳು :

'ಶ್ರೀ ಗುರುವು ಸ್ಮರಣೆಗೈವರ್ಗೆ ಚಿಂತಾಮಣಿಯು'.
'ಗುರುಮೂರ್ತಿ ಸ್ಮರಣೆಯಿಂದಧಿಕ ಧ್ಯಾನಗಳಿಲ್ಲ'.
'ಗುರುವೆ ಅಜ್ಞಾನ ತಿಮಿರಾರ್ಕ ಭವಭಂಜನನು'
'ಅಂಗದೊಳು ಲಿಂಗವಿಲ್ಲದ ನರನೆ ಭವಿ'.
'ಲಿಂಗ ಸತ್‌ಕ್ರಿಯೆ ವರಿಷ್ಟ ಜ್ಞಾನ ಸದ್‌ಭಾವ'
'ಪೃತ್‌ಕಮಲದ ಪರಂಜ್ಯೋತಿ ಲಿಂಗ'.
'ಚೆನ್ನ ಸತ್‌ಕ್ರಿಯೆಯು ಸಮ್ಯಕ್‌ಜ್ಞಾನ ಜಂಗಮ'
'ವೇದಶಾಸ್ತ್ರಾಗಮಾತೀತ ಜಂಗಮ '
'ಪರಬ್ರಹ್ಮರಂಧ್ರದೊಳಿರ್ದ ಸತ್ಯೋದಕವ ಚರಣದಿಂದೆ

ಪಡೆದು, ಇಂತೊಗೆದ ಸುಜ್ಞಾನತೀರ್ಥ...... ಪಾದ ತೀರ್ಥದಾ ಚರಣೆಯೊಳಗಿರ್ಪ ಸದ್‌ಭಕ್ತನಧಿಕಂ'.

'ಖಂಡಿತಾಚರಣೆಯೊಳು ಲಿಂಗೋದಕವ ಮಾಡಿಕೊಂಬುದು ವೀರಶೈವಂ'.

'ಸದ್‌ಭಕ್ತಿಗೆ ಪ್ರಸಾದ ಜನನಸ್ಥಾನ.'

'ಮೂಲ ಚೈತನ್ಯ ಚಿತ್‌ಕಳೆಯಾಗಿ ತೋರುತಿಪ ಭಕ್ತಿ ಪ್ರಸಾದವನು ಭೋಗಿಸುವ ಶರಣನೇ ಸಂತೃಪ್ತನು.'

'ತ್ರಿವಿಧಗುಣ ವರ್ತನೆಯು ಸುಟ್ಟು ಬೊಟ್ಟಿಟ್ಟು...ಚಿದ್ ಭಸಿತ...'

'ಸದ್‌ಭಕ್ತರಂತರಶಾಂತಿ ಚಿತ್‌ಕಳೆಯೆ ವಸುಧೆಗವ ತರಿಸಿ...'

'ಶಿವವಾಕ್ ಸದರ್ಥಮಂಗಲಕೆ ಪೆಸರುಂಟಾಗಿ ಭಸಿತ ಮಂಗಲರೂಪವು'.

'ರುದ್ರಾಕ್ಷಿ ತಾನೆ ಚಿನ್ನಾದಮಯ ಗುರುರೂಪು'

'ರುದ್ರಾಕ್ಷಿಗಳ ಚಿದಂಗಾಭರಣವಾಗಿರ್ಪ ಶರಣಲಿಂಗಕೆ ಗಾಣೆನು'.

'ಪಂಚಭೂತಂಗಳಳಿದುಳಿದ ಪಂಚಾಕ್ಷರವು'

'ವಂಚನೆಯುನತಿಗಳೆದ ಪರಮಪಾವನ...... ಪಂಚ ಪ್ರಣವವು'.

ಈ ಅಷ್ಟಾವರಣ ವೀರಶೈವದ ಕೇವಲ ಬಾಹ್ಯಪರಿಕರ ಗಳಲ್ಲ: ಇವು ಅಂತರಂಗದ ವಿಕಾಸಕ್ಕೆ ಮೂಲ. ಅಂಗಸ್ಥಾ

ಪ್ಟಾವರಣಕ್ಕೂ ಇರುವ ಆಂತರಿಕವಾದ ಆಧ್ಯಾತ್ಮಿಕ ಸಂಬಂಧ
ವನ್ನು ಕುರುಹಿಟ್ಟು ಅರಸಲು, ಅರಸುತ್ತ ಕುರುಹುವಿಡಿಯಲು
ಇವು ಪ್ರೇರಕ; ಪೋಷಕ.

ಶಿವನಿಗಿಂತ ಶಿವಭಕ್ತರು ಮೇಲು. ಈ ಪ್ರಪಂಚದಲ್ಲಿ
ಂದ ಬಳಿಕ ಅವರ ಕಾಯ ಶಿವನನ್ನು ಸಾಧಿಸಲು ಬಂದಂಥದು.
ಈ ಅಷ್ಟಾವರಣಗಳ ಸಂಬಂಧ ಕಾಯದೊಡನೆ ಉಂಟಾದ ಬಳಿಕ
ಜ್ಜೆ ಹೆಜ್ಜೆಗೆ ಭಕ್ತ ಒಂದು ಉನ್ನತ ಪ್ರಜ್ಞೆಯ ಅವಧಾನದ
ಲ್ಲಿಯೇ ಬದುಕಬೇಕಾಗುತ್ತದೆ. ತನ್ನ ಅಸ್ತಿತ್ವ – ಕಾಯ ಮೊದಲು
ಗೊಂಡು – ಸಮಸ್ತದಲ್ಲಿ ಅಂಥ ದೈವೀಶಕ್ತಿಯ ಪ್ರಕಾಶವನ್ನು
ಅನುಭವಿಸಿಯೇ ಬಾಳಬೇಕಾಗುತ್ತದೆ. ಆದುದರಿಂದ ಸಮಾಜ
ಜೀವಿಯಾಗಿ ಬಾಳುವ ವ್ಯಕ್ತಿ ಈ ಅಷ್ಟಾವರಣಗಳ ಅನ್ವಯವನ್ನು
ಆತ್ಮವಿಕಾಸದ ಸಿದ್ಧತೆಗಾಗಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಮೈಲಾರ ಬಸವಲಿಂಗ ಶರಣರು ತಮ್ಮ ಒಂದು ಷಟ್ಪದಿ
ಯಲ್ಲಿ 'ಅಷ್ಟಾವರಣ ಶರಣನೊಳು ಸಂಬಂಧವಾದಂತೆ ಹರನಿ
ಲ್ಲದರಿಂದೆ. 'ಶರಣನಧಿಕಂ' ಎಂದು ವಿವರಿಸಿ ಆ ಅಷ್ಟಾವರಣಗಳು
ಶರಣನ ಕಾಯದೊಡನೆ ಯಾವ ರೀತಿಯ ಆಳವಾದ ಆಂತರಿಕ
ಸಂಬಂಧಗಳನ್ನು ಹೊಂದಿರುತ್ತವೆ ಎನ್ನುವುದನ್ನು ತುಂಬ
ಮಾರ್ಮಿಕವಾಗಿ ಹೇಳಿದ್ದಾರೆ.

'ಅರಿವೇ ಗುರು, ಪ್ರಾಣವೇ ಲಿಂಗ. ಸುಜ್ಞಾನ – ಕ್ರಿಯಾ
ಯುಕ್ತಜ್ಞಾನವೇ ಜಂಗಮ. ಶರಣನ ಜಿಹ್ವೆಯ ರಸವೇ ಪಾದೋ
ದಕ. ನಾಸಿಕದ ಗುಣವೇ ಪ್ರಸಾದ, ತ್ವಕ್ಕಿನ ಸ್ಪರ್ಶಗುಣವೇ ವಿಭ್
ಸಿತ. ನೇತ್ರದಲ್ಲಿ ರುದ್ರಾಕ್ಷಿ; ಶ್ರೋತ್ರದಲ್ಲಿಪಂಚಾಕ್ಷರಿ ಮಂತ್ರ

ಹೀಗೆ ಅಷ್ಟಾವರಣಗಳು ಕೇವಲ ಬಾಹ್ಯ ಪರಿಕರಗಳಾಗಿರದೆ ಆಂತರಿಕ ಪ್ರಜ್ಞೆಯ ಸಂಕೇತಗಳಾಗಿದ್ದು, ಭಕ್ತನು ಈ ಪರಿಸ್ಥರದಲ್ಲಿಯೇ ಉಸಿರಾಡಿಸಬೇಕಾಗುತ್ತದೆ; ತನ್ನ ವ್ಯಕ್ತಿಗತ ಜೀವನದಲ್ಲಿಯೇ ಶುದ್ಧಿಯನ್ನು ಸಾಧಿಸಿಕೊಳ್ಳಬೇಕಾಗುತ್ತದೆ.

**ಪಂಚಾಚಾರ ಪ್ರಕರಣಂ**

ಇನ್ನು ಸಮಾಜಜೀವಿಯಾಗಿ ಬಾಳಬೇಕಾದಾಗ ಪಂಚಾಚಾರಗಳ ಒಂದು ನೈತಿಕ ಹಿರಿಮೆ ಭಕ್ತನಿಗೆ ಅಗತ್ಯ. ನೈತಿಕ ನೆಲೆಗಟ್ಟು ಸಮಾಜ ಜೀವನಕ್ಕೆ ಅಗತ್ಯ.

ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ ಮತ್ತು ಗಣಾಚಾರ : ಈ ಪಂಚಾಚಾರಗಳ ಸೂಕ್ಷ್ಮವನ್ನು [ಬಸವಲಿಂಗ] ಶರಣರು ಹೀಗೆ ವಿವರಿಸಿದ್ದಾರೆ.

**ಲಿಂಗಾಚಾರ** : ಮಂಗಳಸ್ವರೂಪಿ ಮಹಾಗುರುವಿನ ಕೃಪಾದೃಷ್ಟಿ ಸೂಸಿ ಅದರ ಸದ್‌ರೂಪವಾಗಿ ಶಿಷ್ಯನಿಗೆ ಪ್ರಾಪ್ತವಾದ 'ಲಿಂಗವನು ಪಿತ ಮಾತೆ ಸತಿ-ಸುತ ಸಹೋದರರು ಮತ್ತು ಬಾಂಧವರೆಲ್ಲರು' ಎಂದು ಭಾವಿಸಿ ಲಿಂಗವನ್ನು 'ಹೆರಹಿಂಗದಂತೆ ಅನವರತ ಧರಿಸಿಕೊಂಡು' :

'ಅಂಗವೇ ಲಿಂಗ, ಲಿಂಗವೆಯಂಗವಾಗಿ ಮಹ–
ಲಿಂಗ ನಡೆ ಲಿಂಗನುಡಿ ಲಿಂಗ ಸುಖ ಲಿಂಗ ಮುಖಿ
ಲಿಂಗತನು ಲಿಂಗಮನ ಲಿಂಗ ಭಾವಂಗಳಿಂದನವರತವಾ
ಚರಿಸುತ

ಇರುವುದೇ ಲಿಂಗಾಚಾರ.

ಸ್ವಾವರಕ್ಕೆರಗದೆ 'ಹೃದಯದೊಳು ದೃಢನಿಷ್ಠೆ' ತುಂಬಿ ಗುರು ಕೊಟ್ಟ ತನ್ನಸ್ವರೂಪದ ಲಿಂಗವನ್ನು ನಂಬುವುದೇ ಇಷ್ಟ ಲಿಂಗಾಚಾರ.

ಮಂತ್ರಪಿಂಡವಾದ ಕಾಯಕ್ಕೂ ಲಿಂಗಕ್ಕೂ ಇರುವ ಸಂಬಂಧವನ್ನು ಅರಿತು ಶಬ್ದ, ಸ್ಪರ್ಶ, ರೂಪ ರಸಗಂಧ ಮತ್ತು ತೃಪ್ತಿಗಳನ್ನು ಲಿಂಗಕ್ಕೆ ಅರ್ಪಿಸಿ ಅನುಭವಿಸುವುದೇ ಪ್ರಾಣ ಲಿಂಗಾಚಾರವು.

ಹೆಪ್ಪಿನಲ್ಲಿ ಹಾಲು ಅಡಗಿದ ಹಾಗೆ, ನೆಪ್ಪಿನಲ್ಲಿ ಅರಿವು ಮರವೆಗಳು ಅಡಗಿದ ಹಾಗೆ, ಕಣ್ಣಿನ ಕಪ್ಪಿನಲ್ಲಿ 'ಸೂರ್ಯ ಚಂದ್ರಾಗ್ನಿ ಪ್ರಕಾಶಗಳು' ಅಡಗಿ ಕಾಣಿಸಿದ ಹಾಗೆ, ಅರ್ಪಿತಭಾವ, ನಿತ್ಯಾ ರಧಾನ ಕ್ರಿಯಾಚರಣೆಗಳು ನಿಷ್ಪತ್ತಿ – ಸ್ವಯಂಪ್ರಕಾಶ, ಪರಿ ಪೂರ್ಣ – ಸ್ಥಿತಿಯನ್ನು ಹೊಂದುವುದೇ ಭಾವಲಿಂಗಾಚಾರವು.

ಶೈವ ಮತ್ತು ವೀರಶೈವ ನಿತ್ಯಾಚರಣೆಯ ಸ್ಫುಟವಾದ ಸೂಕ್ಷ್ಮಭೇದಗಳನ್ನು ಬಸವಲಿಂಗ ಶರಣರು ವಿವರಿಸುವ ಶೈಲಿ ಅವರ ದಿವ್ಯಾನುಭಾವದ ಸಾಕ್ಷಿಯಾಗಿದೆ. ನಿಷ್ಠಾಭಕ್ತಿಯಿಂದ ಸ್ಥಿರಬುದ್ಧಿಯಿಂದ 'ಶರಣಸಂತತಿಗೆಂದು ಕೃಷಿ ವ್ಯಾಪಾರಾದಿ ಕಾಯಕವಮಾಡಿ "ಸಂಗ್ರಹಿಸಿದ ಧನವನೆಲ್ಲ ಗುರುಲಿಂಗಜಂಗಮ ಸುಭಕ್ತಗಣ ತಿಂಥಿಣಿಗೆ ಪರಶ್ರದ್ಧೆಯಿಂದೆ ದಾಸೋಹವನು ಮಾಡಲದು" ಸದಾಚಾರ.

ನಿರ್ವಂಚನೆಯಿಂದ, ಸದಾ ಸದುವಿನಯಶೀಲನಾಗಿ 'ಆಳಿ ನಾಳಾಗಿ 'ಭಾವಜ್ಯೋತಿಯುಪ್ರತಿಮ ಸಂಯೋಗದೊಳ್ ನಿಷ್ಠೆ' ಗಟ್ಟಿಗೊಂಡು ಬಾಳುವುದೇ ಭೃತ್ಯಾಚಾರ.

ಮತ್ತೆ ಇದರಲ್ಲಿ ಷಟ್‌ಸ್ಥಲಕ್ಕೆ ಅನುಗುಣವಾಗಿ ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ –ಒಬ್ಬೊಬ್ಬರಿಗೂ ಭೃತ್ಯಾಚಾರದ ರೀತಿಯನ್ನು ಬಸವಲಿಂಗ ಶರಣರು ವಿವರಿಸಿದ್ದಾರೆ.

ಅ) 'ಸದ್‌ಭಕ್ತರಾಳಿನಾಳೆಂಬ' ಆಚರಣೆ ಭಕ್ತನ ಭೃತ್ಯಾಚಾರ.

ಆ) 'ಪ್ರತ್ಯುತ್ತರವ ಕೊಡದೆ ಬುದ್ಧಿ. ಹಸಾದ ಕರುಣಿ ಸುವುದು' ಎಂದು ಭಯಭಕ್ತಿಯಿಂದ ಬಾಳುವುದು ಮಹೇಶನ ಭೃತ್ಯಾಚಾರ.

ಇ) 'ಮಹಾನುಭಾವರ 'ಲಿಂಗಾಂಗ ಸಂಯೋಗಿ'ಗಳ ವಿಶಿಷ್ಟ ಪ್ರಸಾದಕ್ಕೆ ಹಂಬಲಿಸುವುದೇ ಪ್ರಸಾದಿಯ ಭೃತ್ಯಾಚಾರ.

ಈ) ಲಿಂಗಮುಖವಾದ ಜಂಗಮಕ್ಕೆ ಸತ್ಯ ಶುದ್ಧ ಕಾಯಕದ ಆಯುವನು ಅರ್ಪಿಸಿ ಸಂತೃಪ್ತಿ ಪಡಿ ಸುವ ಭಕ್ತರಿಗೆ ಸೇವಕನಾಗಿ ಬಾಳುತ್ತೇನೆ ಎನ್ನು ವುದೇ ಪ್ರಾಣಲಿಂಗಿಯ ಭೃತ್ಯಾಚಾರ.

ಉ) ಅಂಗದ ಹಮ್ಮು ಕರಗಿ 'ಮನವನು ತಂದು ಲಿಂ ದೊಳು ನೆಲೆಗೊಳಿಸಿ. ಆತ್ಮದಲ್ಲಿ ಜಂಗಮ

ಏರಕಗೊಂಡು. ಇಷ್ಟಪ್ರಾಣಭಾವ ತ್ರೈಲಿಂಗದ ಆರೋಗಣೆಯನ್ನು ಮಾಡುವ ಭಕ್ತರ ಪಾದ ಕಮಲಗಳಿಗೆ ಭೃಂಗದಂತೆ ಎರಗುವುದೇ ಶರಣನ ಭೃತ್ಯಾಚಾರ.

೫) ಮನಸ್ಸಿನ ಯುಕ್ತಿಗಳೆಲ್ಲ ತಾನೇತಾನಾಗಿ ನಿಷ್ಪತ್ತಿಗೊಂಡು 'ನಿಜವನೊಡಗೂಡಿರ್ಪ ಭಕ್ತರಿಗೆ ತೊತ್ತಾಗಿ ಬಾಳ್ವೆನೆಂಬುದು ನಿಜೈಕ್ಯಂಗೆ ಭೃತ್ಯಾಚಾರವು.

ವಿನಯಶೀಲತೆ, ನಿರಹಂಕಾರವೃತ್ತಿ, ಮತ್ತು ಸೌಜನ್ಯಗಳನ್ನು ಊಳಿದು ಬಾಳಿದರೆ ಸಮಾಜ ಜೀವನ ಸಫಲವಾಗಿರಲಾರದು. ಸಾಮಾಜಿಕ ಜೀವನ ಸಾರ್ಥಕವಾಗಬೇಕಾದರೆ ಇಂಥ ಒಂದು ನೈತಿಕ ಪ್ರಜ್ಞೆ ಸಮಾಜದ ಸಕಲರಿಗೂ ಅಗತ್ಯ ಎನ್ನುವುದು ಈ ಪಂಚಾಚಾರಗಳ ಸಾಮಾಜಿಕ ಹಿರಿಮೆ.

ಇನ್ನು ಸಮಾಜದಲ್ಲಿ ವ್ಯಕ್ತಿ ತಾನು ಗಳಿಸಿದ ಪದಾರ್ಥದಿಂದ ಪಡೆಯುವ ಫಲಭೋಗಗಳು ವಿಲಾಸಕ್ಕೆ ವೈಭೋಗಕ್ಕೆ ಸ್ವೇಚ್ಛಾಚಾರಕ್ಕೆ ಕಾರಣಗಳಾಗದಂತೆ ವ್ಯಕ್ತಿಯು ಸಕಲ ಸುಖಭೋಗಗಳಿಗೆ ಪ್ರಸಾದಿಯ ಸಂತೃಪ್ತಿಯನ್ನು ತುಂಬುವುದೇ ಶಿವಾಚಾರದ ಗುರಿ.

'ಲಿಂಗದಿಂದುಳಿಮೆಯಾದ ಸತ್ಯಪ್ರಸಾದವನು ಬಿಡದೆ ಭೋಗಿಸುತ' ಈ ಮರ್ತ್ಯವೇ ಕೈಲಾಸವೆಂದು ನಂಬಿ ನಡೆಯು

ಪ್ರದು: ಪ್ರೀತಿಯಿಂದ ಅನುಭವಿಸುವುದು. 'ಅನುಭವದ ನುಡಿ ಯಂತೆ ನಡೆಯುತ್ತಿಹುದು' ಸದ್ಭಕ್ತ ಶರಣರಲ್ಲಿ ಪೂರ್ವಕುಲ ಗೋತ್ರ ಜಾತಿ ಆಶ್ರಮಗಳನ್ನು ಹುಡುಕದೆ ಭಕ್ತಜಂಗಮವೆ ಘನವೆಂದು ನೆರೆನಂಬಿ ಬಾಳುವುದು ಇದೇ ಶಿವಾಚಾರದ ಪಥ ವಾಗಿದೆ.

ಸ್ವಾಭಿಮಾನ, ಶ್ರದ್ಧೆ. ಧೈರ್ಯ ನಿಷ್ಠೆಗಳಿಂದ ಧಾರ್ಮಿಕಾ ಚರಣೆಯಲ್ಲಿ ತೊಡಗಿರುವುದೇ ಗಣಾಚಾರ.

ದುರಿತ ದುರ್ಮದ ತಲೆಗೇರಿದ ಅಜ್ಞಾನಿಗಳ ದುರ್ನುಡಿ ದೂಷಣಗಳಿಗೆ ಕಿವಿಗೊಡದಿರುವುದು. ಅನವರತ ನಿಷ್ಠೆ. ಆಚರ ರಣೆಯ ಇಂಗಿತವನ್ನು ಅರಿಯದೆ ನಿಂದಿಸುವವರನ್ನು ಖಂಡಿಸಿ. 'ಭ್ರಷ್ಟಮಾನವರ ಮಸ್ತಕ ಶೂಲವಾಗಿ' ಅನ್ಯಾಯ ಅಧರ್ಮ ಗಳ ವಿರುದ್ಧ ಬಂಡೆದ್ದು. ಆತ್ಮದರಿವಿನ ಮಹಾಬೆಳಗಿನಲ್ಲಿ ಬದುಕುವುದು – ಇವು ಗಣಾಚಾರದ ಮುಖ್ಯಲಕ್ಷಣಗಳು.

ಷಟ್‌ಸ್ಥಲಗಳ ನಿತ್ಯಾಚರಣೆಯಿಂದ ಪರಿಶುದ್ಧಕಾಯನಾದ ಅಂಗವೇ ಲಿಂಗವಾದ ಶರಣನು ಸತ್ಯಶುದ್ಧಕಾಯದಿಂದ ಸಗುಣ ರೂಪವ ಧರಿಸಿ' ವಿರಕ್ತಿಯಿಂದ ಆಚರಿಸಿ. ನಿಷ್ಪತಿಯ ಪ್ರಕಾಶದ ಅವಿರಳಾನಂದದ ನಿಜೈಕ್ಯ ನಿಲವಿನಲ್ಲಿ ಬಾಳುವ 'ಷಟ್‌ಸ್ಥಲ ಬ್ರಹ್ಮಿ' ಶರಣನು ಹರನಿಂದ ಅಧಿಕ. ಮರ್ತ್ಯವೇ ಮಹ–ಮಹಕ್ಕಿಂತ ಮುಖ್ಯ ಎನ್ನುವ ಮಾತುಗಳನ್ನೇ ಬಸವಲಿಂಗ ಶರಣರು ಧರ್ಮಾ ಚಾರ ಪ್ರಕರಣದಲ್ಲಿ ವಿವಿಧ ಉದಾಹರಣೆಗಳ ಮೂಲಕ ವಿವರಿಸಿದ್ದಾರೆ.

ಶಿವಶರಣನು ನಿಜಮುಕ್ತ. ಮರ್ತ್ಯ ಬೇರೆ ಕೈಲಾಸ ಬೇರೆ ಎನ್ನುವುದು ಹಾಸ್ಯಾಸ್ಪದ.

'ಪುರುಷ ಮಂಚದ ಮೇಲೆ ಸತಿಯು ಕೆಳಗೊರಗಿರಲು
ಸರಸ ಸಂಯೋಗ ಸಮರತಿಯುಂಟೆ ಎಲೆಮರುಳೆ
ಧರಣಿಯೊಳಗಿರ್ದು ಕೈಲಾಸದಲ್ಲಿಹ ಶಿವನ ಪೂಜಿಸುವ
ಪರಿಯದೆಂತೋ ?'

ಎಂದು ಕೇಳಿದ ಬಸವಲಿಂಗ ಶರಣರು 'ಮನಭಾವ ಕರಣ ಹರಣಗಳು ತನ್ಮಾಕಾರವಾದಿಷ್ಟಲಿಂಗವೊಂದನೆ ಭಜಿಸಿ...... ಏಕವಾಗಿಹ ಶರಣನು' ಪರಮಶ್ರೇಷ್ಠ ಎಂದು ಸಾರುತ್ತಾರೆ.

ಮೈಲಾರ ಬಸವಲಿಂಗ ಶರಣರ ವೀರಶೈವ ಸಿದ್ಧಾಂತ ಕೃತಿ ಚಿಕ್ಕದಾದರೂ ಅದರಲ್ಲಿ ವಿವರಿಸಲಾಗಿರುವ ತಾತ್ತ್ವಿಕ ವಿಚಾರಗಳು ವೀರಶೈವದ ಶುದ್ಧಾಚರಣೆಗೆ ಕೈಗನ್ನಡಿಯಾಗಿವೆ. ಶೈವ ಮತ್ತು ವೀರಶೈವಗಳ ನಿತ್ಯಾಚರಣೆಯಲ್ಲಿ ತತ್ತ್ವವಿಧಾನದಲ್ಲಿ, ನಿಲುವಿನಲ್ಲಿ. ಧೋರಣೆಗಳಲ್ಲಿ ಇರುವ ಅನೇಕ ಮೂಲಭೂತ ಸೂಕ್ಷ್ಮ ವ್ಯತ್ಯಾಸಗಳನ್ನು ಬಸವಲಿಂಗ ಶರಣರು ತಮ್ಮ ಕೃತಿಯಲ್ಲಿ ನಿರೂಪಿಸಿರುವುದು ಮಹತ್ವದ ಅಂಶವಾಗಿದೆ.

'ಶೈವ ಹಾಗೂ ವೀರಶೈವ ಈ ಎರಡಕ್ಕೂ ಉಪಾಸ್ಯ ದೇವತೆ ಒಂದೇ ಎಂಬ ಕಾರಣದಿಂದ. ಇವೆರಡಕ್ಕೂ ಶಿವಾಗಮಗಳೇ ಆಧಾರ ಎಂಬ ದೃಷ್ಟಿಯಿಂದ ವಿಚಾರಿಸಿದರೆ ಭಕ್ತಿಯ ಹೆಚ್ಚಳವೊಂದನ್ನು ಬಿಟ್ಟರೆ. ಈ ಎರಡು ಮತಗಳಿಗೂ ಹೆಚ್ಚಿನ ಭೇದವೇನೂ ಸಕೃದ್ದರ್ಶನಕ್ಕೆ ತೋರದಿರುವುದು ಸಹಜವಾಗಿದೆ.

ಆದರೆ ಹೆಚ್ಚು ಆಳವಾಗಿ ವಿವೇಚಿಸಿದವರಿಗೆ ಶೈವಕ್ಕೂ ವೀರಶೈವಕ್ಕೂ ಬಹಳ ಅಂತರವಿದೆಯೆಂದೂ ಅಲ್ಲದೆ ಬಸವಣ್ಣನವರ ಕಾಲದಿಂದ ಈಚೆಗೆ ರೂಪಗೊಂಡಿರುವ ವೀರಶೈವಕ್ಕೂ ಮೊದಲಿನ ಶೈವಕ್ಕೂ ಮಹದಂತರವಿದೆಯೆಂದೂ ಹೊಳೆಯದಿರದು'[೧] ಅನೇಕ ಆಚರಣೆಗಳಲ್ಲಿ ವೀರಶೈವಕ್ಕೆ ಸಮ್ಮತವಲ್ಲದ ಕ್ರಿಯಾಚರಣೆಗಳು ನುಸುಳಿಕೊಂಡು ವೀರಶೈವವೂ ಶೈವದ ಕೆಲವು ಕುರುಡು ಪರಂಪರೆ ಸಂಪ್ರದಾಯಗಳಿಂದ ಜಿಡ್ಡುಗಟ್ಟುತ್ತಿದ್ದ ಸಮಯದಲ್ಲಿ ಬಸವಲಿಂಗ ಶರಣರು ಸ್ವಾನುಭಾವದ ಬೆಳಕಿನಲ್ಲಿ ತಮ್ಮ ಕೃತಿರಚನೆ ಮಾಡಿದ್ದಾರೆ. ಆದುದರಿಂದ 'ಮೈಲಾರದ ಬಸವಲಿಂಗ ಶರಣರನ್ನು ಕೇವಲ ವೀರಶೈವದ ವಿಶಿಷ್ಟ ಲಕ್ಷಣಗಳಾದ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಈ ಮೊದಲಾದ ವಿಷಯಗಳ ವಿವೇಚನೆಗಾಗಿಯೆ ತಮ್ಮ ಕೃತಿಗಳನ್ನು ಮೀಸಲಾಗಿ ಲಾಗಿರಿಸಿದವರೆಂದು – ಬೇರ್ಪಡಿಸುವುದು ಅವಶ್ಯವೆನಿಸುತ್ತಿದೆ; ಸೂಕ್ತವೂ ಎನಿಸುತ್ತಿದೆ.'[೨] ಪ್ರೊ. ಬಸವನಾಳರು ವೀರಶೈವ ಸಾಹಿತ್ಯದ ಹಾಡುಗಬ್ಬದ* ಪರಂಪರೆಯ ವಿವೇಚನೆಮಾಡುತ್ತ ಹೇಳಿದ ಈ ಮಾತು ಮೈಲಾರ ಬಸವಲಿಂಗ ಶರಣರ ಕೃತಿ ರಚನೆಯ ವಿಶಿಷ್ಟ ಉದ್ದೇಶಕ್ಕೂ ಅನ್ವಯವಾಗುತ್ತವೆ.

## ಗುರುಕರುಣತ್ರಿವಿಧಿ :

ಬಸವಲಿಂಗ ಶರಣರ ಎರಡನೆಯ ಕೃತಿ ಗುರುಕರುಣ ತ್ರಿವಿಧಿ: ಇದು ಅವರ ಅನುಭಾವ, ಭಕ್ತಿಗಳಿಗೆ ಉನ್ನತ ಮಾದರಿ

೧. ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು ಸಂ. ಶಿ. ಶಿ. [ಬಸವನಾಳ,] ಪ್ರಸ್ತಾವನೆ ಪು, ೩

೨. ಅದೇ ಪುಟ ೨

ತೂಗಿದೆ. ಜನಪದ ತ್ರಿಪದಿ ಛಂದಸ್ಸನ್ನು ಲೀಲಾಜಾಲವಾಗಿ
ಳಸಿದ ಶರಣರು ಗುರುಕರುಣೆಯನ್ನು ಯಾಚಿಸುವಾಗ ಶಿಷ್ಯನ
ಂತರಾಳದಿಂದ ಚಿಮ್ಮುವ ಭಾವನೆಗಳ ಸೊಗಸಿಗೆ ಭಕ್ತಿಸುನಾದದ
ರಂಗಿತತೆಯನ್ನು ಅಳವಡಿಸಿದ್ದಾರೆ.

ವೀರಶೈವರು ಗುರು ಲಿಂಗ ಜಂಗಮಗಳು ಮಹಾಲಿಂಗದ
ಮೂರು ರೂಪಗಳೆಂದು ನಂಬುತ್ತಾರೆ. ಆ ಮಹಾಲಿಂಗ
ಧಕನಿಗೆ ಲಿಂಗವೇ ಮೂಲ.' 'ಕಂಗಳಾಲಯದ ಚಿಜ್ಜ್ಯೋತಿ
ರೂಪಾದಿಷ್ಟ ಲಿಂಗವನ್ನು ಶಿಷ್ಯನ ಕರಕಮಲದಲ್ಲಿ ಇಟ್ಟು
ಂಗಳಾತ್ಮಕ ಸಂಯೋಗಗೊಳಿಸುವವನು ಗುರು.

ಗುರುವಿನ ಹಿರಿಮೆ ವೀರಶೈವದ ವಿಶಿಷ್ಟ ಲಕ್ಷಣವೂ
ಔಮು. ಸುಮಾರು ೩೩೩ ತ್ರಿಪದಿಗಳ ತರಂಗರೂಪವೇ ಈ
ತಿ.

ಗುರು ಸತ್‌ಕ್ರಿಯೆಗಳ ಆಗರ. ಸುಜ್ಞಾನಸಾಗರ. ಸಜ್ಜನ
ಮನೋಹರ, ಸಂಕಲ್ಪನಾಶಕ, ತಾಮಸದ ಚಿತ್‌ಸೂರ್ಯ.
ಡರಿಗೆ ಧೈರ್ಯ. ಹರನಿಂದಲಧಿಕ, ಶರಣಸಂತತಿಗೆ ಕರ್ತ.
ದುದರಿಂದ ಗುರುವೇ ನಿಮ್ಮ ಹಿರಿಮೆಯನ್ನು ಬಣ್ಣಿಸುತ್ತೇನೆ,
ತಿಸುತ್ತೇನೆ.

'ಎಲ್ಲ ದೈವಕೆ ನಿಮ್ಮ ಮೆಲ್ಲಡಿಯೆ ಘನವೆಂದು
ಸೊಲ್ಲಿಗೊಮ್ಮೊಮ್ಮೆ ನುತಿಪೆನಾಂ ಗುರುರಾಯ
ಸಲ್ಲೀಲೆಯಿಂದೆ ಕೃಪೆಯಾಗು'

ಶಿವಸನ್ನಿಧಿಯನ್ನು ಬಯಸಿದವರಿಗೆ ಭವ ಉಂಟು: ಮರಣ ವುಂಟು. ಆದುದರಿಂದ ನಿನ್ನ ಪಾದಸನ್ನಿಧಿ ಬಯಸಿ ಬಂದಿದ್ದೇನೆ. ಕೃಪೆಯಾಗು.

ಶೈವ ಮಾರ್ಗದಲ್ಲಿಯೂ ಭವದ ನೋವಿದೆ. (ಆದುದ ರಿಂದ) ಅದನ್ನು ನೀನು ಪರಿಹರಿಸು.

'ಶೈಮಾರ್ಗದ ಭವದ ನೋವ ತೀರಿಸಿ ವೀರ-
ಶೈವಾಮೃತ ಮೊಲೆಯನುಣಿಸಿ ಪೊರೆದೆನ್ನ ಹೆ-
ತ್ತವ್ವ ಶ್ರೀಗುರುವೆ ಕೃಪೆಯಾಗು'—

ಹೀಗೆ ಹಲವಾರು ರೀತಿಯಿಂದ ವೀರಶೈವ ತತ್ತ್ವದ ಪರಿ ಯನ್ನು ಈ ತ್ರಿವಿಧಿಗಳಲ್ಲಿ ಬಸವಲಿಂಗ ಶರಣರು ಮನಮುಟ್ಟು ವಂತೆ ನೇರ, ಸರಳ ಸರಸವಾಗಿ ವರ್ಣಿಸುತ್ತಾರೆ. ಇಂದ್ರಿಯಗಳ ಉನ್ಮತ್ತತೆ ಮತ್ತು ಕಾಮವಿಕಾರಗಳಿಗೆ ಸಿಕ್ಕ ಲೋಕ ತತ್ತರಿಸುತ್ತ ಲಿದೆ. ಅದಕ್ಕೆ ನಾ ನಿಮ್ಮ ಮೊರೆ ಹೊಕ್ಕಿದ್ದೇನೆ ಎಂದು ಹೇಳುವಾಗ ಅವರು ಬಳಸುವ.

'ಕರಿಯ ಕಬ್ಬಿನ ಬಿಲ್ಲು ಅರಳುಮಲ್ಲಿಗೆ ಬಾಣ-
ದುರುವಣೆಗೆ ಲೋಕ ಉರುಳಲ್ಕೆ ನಾ ನಿಮ್ಮ
ಮರೆಬಿದ್ದೆ ಗುರುವೆ ಕೃಪೆಯಾಗು'

'ಕರಿಯಕಬ್ಬಿನ ಬಿಲ್ಲು ಅರಳುಮಲ್ಲಿಗೆ ಬಾಣ' ಮುಂತಾದ ಪ್ರತೀಕಾರ್ಥದ ಸೊಗಡು ದಟ್ಟವಾಗಿ ಮನಮುಟ್ಟುತ್ತದೆ.

'ಪಶ್ಯನಾರಿ ಮಾನವಮಾರಿ, ಬದುಕನ್ನು ಅರಣ್ಯವಾಗಿಸಿ
ತ್ತಾಳೆ. ದಾರಿಗೊಂಡವರನ್ನು ಸೂರೆಗೊಳ್ಳುತ್ತಾಳೆ' ಎಂದು
ಮಾಯೆಯನ್ನು ಪರಿಪರಿಯಾಗಿ ವಿವರಿಸುತ್ತಾರೆ.

ಅಜ್ಞಾನ ಮರವೆಗಳೇ ಮಾಯೆ.

ಹುಲ್ಲೆಯ ಕರು ಹುಲ್ಲಿನ ಹಸುರಿಗೆ ಮರುಳಾಗಿ ಮೇಯು
ತ್ತದೆ. ಮುಂದೆ ಆ ಹುಲ್ಲೇ ಹುಲಿಯಾಗಿ ನುಂಗುತ್ತದೆ ಎನ್ನುವ
ಮಾತು ಬಸವಣ್ಣನವರ, 'ಪಶುವೇನು ಬಲ್ಲುದು ? ಹಸುರೆಂದೆಳಸು
ವುದು' ವಚನದ ತ್ರಿಪದಿರೂಪವಾಗಿದೆ. ಪರವಸ್ತುವಿನ–ಸ್ವಸ್ವರೂಪ
ಸಂಕೇತದ ಚಿಜ್ಜ್ಯೋತಿರೂಪಾದ ಲಿಂಗವನ್ನು ಕರುಣಿಸುವ
ವರೆಗೂ ಭಕ್ತನಿಗೆ ಉಂಟಾಗುವ ಭ್ರಾಂತಿ ನೂರಾರು ಪರಿ. ಅದನ್ನು
ಬಸವಲಿಂಗಶರಣರು ಹತ್ತಾರು ರೂಪಕ, ಪ್ರತಿಮೆಗಳಲ್ಲಿ ವಿವರಿ
ಸುತ್ತಾರೆ.

ಕರಿಯ ಬಣ್ಣದ ಪಕ್ಷಿ ಗರಿಯು ಗಾಳಿಯು ಕೂಡಿ
ತಿರುಗಿ ನಾ ಸೋತು, ಸಿರಬಾಗಿ ನಿಮ್ಮಂಘ್ರಿ–
ಗೆರಗಿದೆನು ಗುರುವೆ ಕೃಪೆಯಾಗು'.

ಮರವೆ ಅಜ್ಞಾನಕ್ಕೆ ಪ್ರತೀಕ ಕರಿಯ ಬಣ್ಣದ ಹಕ್ಕಿ–ಬೆಡಗು
ಬಿಜನೆ ಕೂಡಿದ ಉನ್ಮಾದ ವಿಕಾರಗಳ ಬೆಂಬತ್ತುವುದರ ರೂಪಕ
ಗರಿಯು ಗಾಳಿಯು ಕೂಡಿ–ತಿರುಗುವುದು. ಅಹಂಕಾರ ಕರಗಿ
ಅರಿವು ಸಮರಗೊಂಡುದರ ಪ್ರತೀಕ 'ಸಿರಬಾಗಿ.'

ಹದ್ದು ಹಾವನು ಕಚ್ಚಿ ಬದ್ಧ ವಿಷ ತಲೆಗೇರಿ
ಬಿದ್ದೆನ್ನೈ ನೆಲಕೆ ಮದ್ದು ಮಂತ್ರವಬಲ್ಲ
ಸಿದ್ಧ ಶ್ರೀಗುರುವೆ ಕೃಪೆಯಾಗು'

ಅಹಂಕಾರಕ್ಕೆ ಕಾಮಕ್ಕೆ ಸಂಕೇತವಾಗಿ 'ಹಾವು'. ಮರವೆಗೂಡಿದ ಮನುಷ್ಯನ ಸಂಕೇತ ಹದ್ದು'. ಹೀಗೆ 'ಹಾವು ಕಚ್ಚಿದ ಹದ್ದು' 'ವಿಷ ತಲೆಗೇರಿ' ನೆಲಕ್ಕೆ ಬೀಳುವುದು. ಇವನನ್ನು ಉದ್ಧರಿಸಲು ಬೇಕಾದ ಮದ್ದು ಮಂತ್ರ ಬಲ್ಲ–ಭವರೋಗವೈದ್ಯ ಗುರು.

'ಸವಣೂರಪೇಟೆ' 'ಹುಬ್ಬಳ್ಳಿಪೇಟೆ' 'ಇಕ್ಕೇರಿಕೌಬೀದಿ' ಗಳನ್ನು ಜೀವನದ ವ್ಯಾವಹಾರಿಕ ನಿತ್ಯ ಚಟುವಟಿಕೆಗಳಿಗೆ ಪ್ರತೀಕವಾಗಿ ಬಳಸಿದ ಶರಣರು 'ಸಂತೆಯುಶಬ್ದ' ಕಬ್ಬಿನ ಕೈಮಾರಾಟ 'ಫಲ ಸರಕ ತಕ್ಕೊಂಡು ಮಾರುವುದು' ಹೀಗೆ ಲೋಕದ ನಿತ್ಯದ ಬದುಕು ಕೇವಲ ಆಡಂಬರ, ವಂಚನೆ, ಲಾಭಬಡಕತನದಿಂದಾಗಿ ಸ್ವಾರ್ಥದಲ್ಲಿ ಪರ್ಯವಸಾನಗೊಳ್ಳುವುದು – ಈ ಮುಂತಾದವುಗಳನ್ನು ಅರ್ಥದ ಹೊಗರಿನಿಂದ ಕಳಕಳಿಸುವ ರೂಪಕಗಳಲ್ಲಿ ನಿರೂಪಿಸುವ ಇವರ ಶೈಲಿ ಬೆಡಗಿನಿಂದ ಕೂಡಿದೆ. ಕಾವ್ಯಗುಣಕ್ಕೆ ಮತ್ತು ಭಾವಸೌಂದರ್ಯಕ್ಕೆ ಇಂಥ ರಚನೆಗಳು ಮೆರಗು ನೀಡುತ್ತವೆ. 'ಬೆಡಗು' ಎನ್ನುವುದು ಶರಣರ ಅನುಭಾವದ ವಿಶಿಷ್ಟ ನಿಲವಿನ ಚಿತ್ರ ಸೃಷ್ಟಿ. ಅನುಭಾವದ ಅಮೂರ್ತ ಕಲ್ಪನೆಯನ್ನು ಸಾಕಾರಗೊಳಿಸುವಾಗ, ಶರಣರು ತಮಗೆ ಹೊಳೆದ ಒಂದ ದಿವ್ಯ ಭಾವಕ್ಕೆ, ಅಂತರಂಗದಲ್ಲಿ ಹೊಮ್ಮಿದ ದೈವಿ ಸ್ಫುರಣಕ್ಕೆ ಕಲ್ಪನೆಗೆ ಸಂಕೇತವಾಗಿ ಕೆಲವು ಲೌಕಿಕ ವಸ್ತು, ವಿಷಯ ಸಂಗತಿಗಳನ್ನು ಬಳಸಿಕೊಳ್ಳುತ್ತಾರೆ. ಅನಿರ್ವಚನೀಯವಾದ

ಅನುಭವ ವೇದ್ಯವಾದಾಗ ಅದು 'ಬೆಡಗಿನ' ರೂಪ ತಾಳುತ್ತದೆ. ರೂಪಕ, ಶ್ಲೇಷೆಗಳ ಮೂಲಕ ಅಮೂರ್ತವನ್ನು ಮೂರ್ತಗೊಳಿಸುವುದು ಸುಲಭವೂ ಅಲ್ಲ - ಸುಲಭಗ್ರಾಹ್ಯವೂ ಅಲ್ಲ. ಆದರೆ ಅನುಭಾವಪಥದ ದಿವ್ಯದೃಷ್ಟಿಯು ಕಂಡುದನ್ನು ಪರಿಚಯಿಸಿದ್ದರೂ ಕಿರಣದ ಎಳೆ ಹಿಡಿದು ಪ್ರಕಾಶಗೊಳಿಸುವನ್ನು ತೆರೆದಿಡುವ ರೀತಿ ಬೆಡಗಿನದು.

ಶಿರಹಟ್ಟಿಯೊಳಗೊಂದು ಕರುವಿಲ್ಲದಾಕಳಿಗೆ
ಕರೆವ ಮೊಲೆಯಿಲ್ಲ. ಕರೆದುಂಬುತಿದೆ ಗೋವು
ಕರಚೋದ್ಯ ಗುರುವೆ ಕೃಪೆಯಾಗು

'ಶಿರಹಟ್ಟಿ' ವಾಸ್ತವ ಪ್ರಪಂಚದ ಒಂದು ಊರು. ಅಧ್ಯಾತ್ಮಿಕವಾಗಿ ಈ ಊರಿನ ಹೆಸರಿಗೆ ಶ್ಲೇಷಾರ್ಥವಿದೆ. ಕಾಯದಲ್ಲಿ ಪ್ರಧಾನಾಂಗ ಶಿರಸ್ಸು; ಅದರ ಮುಂಭಾಗ ಮಸ್ತಕ. ಅಲ್ಲಿ ಕರುವಿಲ್ಲದಾಕಳು. ಕರೆವ ಮೊಲೆಯೂ ಇಲ್ಲ. ಆದರೂ ಗೋವು ಕರೆದು ಉಂಬುವ ಚೋದ್ಯವಿದೆ.

ಈ ತ್ರಿಪದಿಯ ಬೆಡಗು ಅತೀಂದ್ರಿಯ ವಸ್ತುವೊಂದರ ಸಂಕೇತವಾಗುತ್ತದೆ. ಗುರುವು ಶಿಷ್ಯನ 'ಹಸ್ತಮಸ್ತಕ' ಸಂಯೋಗದಿಂದ ಅವನಿಗೆ ಚಿತ್ಕಳೆಯಾದ ಲಿಂಗವನ್ನು ಕರುಣಿಸುತ್ತಾನೆ. ಮಸ್ತಕದ ಅರಿವು–ಸ್ವಯಂಪ್ರಕಾಶ–ಅದೇ ಕರುವಿಲ್ಲದ ಆಕಳು. ಮಾತುಮನಗಳನ್ನು ಮೀರಿದ ಚಿತ್ತದ ಸ್ಥಿತಿ. ಅದು ಕರೆವ ಮೊಲೆಯಿಲ್ಲ, ಲಿಂಗದ ಸ್ವಯಂಪ್ರಕಾಶ ಜೀವಗುಣಗಳನ್ನು ಕರೆದು–ನುಂಗಿದೆ–ಉಂಬುತ್ತಿದೆ – ಮತ್ತೆ ಬೆಳಗುತಿದೆ. ಇದೇ ಅಚ್ಚರಿ.

ಹೀಗೆ ಬಸವಲಿಂಗ ಶರಣರ ತ್ರಿವಿಧಿಗಳಲ್ಲಿ—ಅಲ್ಲಲ್ಲಿ—ವಚನ ಸಾಹಿತ್ಯದ ಬೆಡಗಿನ ವಚನಗಳ ಪ್ರಭಾವವನ್ನು ಕಾಣಬಹುದಾಗಿದೆ.

ಬದುಕಿನ ಕಡಲು ಅಪಾರ. ಅಜ್ಞಾನವೇ ವಾಹಕವಾದರೆ ಕಡಲು ದಾಟುವುದು ಹೇಗೆ? ಅದಕ್ಕಾಗಿ ಮೂಢತನವನ್ನು ತೊಲಗಿಸಿ ಲಿಂಗಾಂಗ ಸಾಮರಸ್ಯದ ರಹಸ್ಯವನ್ನು ಬೋಧಿಸುವ ಗುರು, ಕೃಪೆಗೈಯಬೇಕು, ಎಂದು ಹೇಳುವ ಮತ್ತೊಂದು ತ್ರಿಪದಿಯು ಶಬ್ದಚಿತ್ರ ನಿಖರ ಅರ್ಥಕ್ಕೆ ಪ್ರಖರವಾದ ಹೊಗರು ತುಂಬುತ್ತದೆ.

'ಶಿಲೆಯ ತೆಪ್ಪವನೇರಿ ಜಲವ ದಾಂಟುವೆನೆಂಬ
ಬಲುಮೂಢ ತನವ ತೊಲಗಿಸಿ ನೀನೆನ್ನ
ಸಲಹು ಶ್ರೀ ಗುರುವೆ ಕೃಪೆಯಾಗು'.

ಗುರುಕರುಣ ತ್ರಿವಿಧಿಯ ಆರಂಭದ ಪದ್ಯಗಳಲ್ಲಿ ಮತ್ತು ಇತರ ಕೆಲವು ಕಡೆ ಶರಣರ ಅನುಭಾವ ಮಿಂಚುತ್ತದೆ. ವೀರಶೈವ ಧರ್ಮದ ಪಂಚಾಚಾರ ಅಷ್ಟಾವರಣಗಳ ಮಹತಿಯನ್ನು ಪರಿ ಪರಿಯಾಗಿ ಸುಲಭೀಕರಿಸಿದ ನುಡಿಗಳು ಇಂದಿಗೂ ಜನಪ್ರಿಯ ವಾಗಿರುವುದು ಈ ರಚನೆಗಳ ಹಿರಿಮೆಯನ್ನು ಸಾರುತ್ತದೆ.

**ಶಿವಾನುಭವದರ್ಪಣ :**

'ಶಿವಾನುಭವದರ್ಪಣ' ಬಸವಲಿಂಗ ಶರಣರ ಮೂರ ನೆಯ ಕೃತಿ. ಇದು ಅನೇಕ ಬಿಡಿ ಹಾಡುಗಳ ಸಂಕಲನವಾಗಿದ್ದು

ದ್ವಿಪದಿ, ಚೌಪದಿ, ಷಟ್ಪದಿಗಳ ರೂಪದಲ್ಲಿ ಇಲ್ಲಿಯ ಹಾಡುಗಳು ರಚಿತವಾಗಿವೆ. ಇವರ ಕೆಲವು ರಚನೆಗಳನ್ನು ಭಜನಾಮೇಳದವರೂ ಹಾಡುತ್ತಾರೆ.

ಗುರುವಿನ ಮಹಿಮೆ, ಕರುಣೆ, ಗುರುವಿನ ಉಪದೇಶ, ಲಿಂಗಸ್ವರೂಪ, ಮಂಗಳಾರತಿಯ ಪದಗಳು, ಪಾದೋದಕ, ಪ್ರಸಾದಗಳ ಹಿರಿಮೆ, ಮಂತ್ರ ಮಹಿಮೆ ಹೀಗೆ ಸಲೀಸಾಗಿ ಮೇಳದಲ್ಲಿ ಹಾಡಲು ಬರುವಂಥ ರಚನೆಗಳ ಜೊತೆಗೆ ಕೆಲವು ನೀತಿ ಬೋಧೆಯ ಪದಗಳೂ ಕೂಡಿವೆ. ಡಂಭಾಚಾರದ ಖಂಡನೆ, ಸದಾಚಾರದ ಮಂಡನೆಯೇ ಇಲ್ಲಿ ಮುಖ್ಯವಸ್ತು.

ಭವಿಯ ಭಕ್ತರ ಭೇದವನ್ನು ಅರಿಯುವುದು ಹೇಗೆ? ಅವರ ವಿವಿಧ ವರ್ತನೆಯಿಂದ.

ಪರಸ್ತ್ರೀಯರನ್ನು ಕಾಮಿಸುವವನು ಭವಿ. ಚಿಜ್ಯೋತಿ ರೂಪಾದ ಲಿಂಗದಲ್ಲಿ ಅಂಗಸಮರಸಗೊಳಿಸುವಾತ ಭಕ್ತ.

ಗುರು ನರನೆಂದು ಭಾವಿಸುವವ ಭವಿ. ಪಂಚೇಂದ್ರಿಯಗಳ ಸ್ವೇಚ್ಛಾಗುಣಕ್ಕೆ ಕೋಪಿಸುವವನು ಭಕ್ತ. ಲೌಕಿಕ ವ್ಯಕ್ತಿಗಳಲ್ಲಿ ಅತಿಮೋಹವುಳ್ಳವನೇ ಭವಿ. ಶರಣಸಂತತಿಯೇ ಬಂಧು ಎನ್ನುವವನು ಭಕ್ತ. ಕಣಿ, ಜ್ಯೋತಿಷ್ಯ, ಸೂತಕಗಳ ಖಂಡನೆ 'ಸೂತಕ- ಪಾತಕವಿಲ್ಲವೆಂದೊರೆವ' ಎನ್ನುವ ಹಾಡಿನ ಗುರಿ.

ಸೂತಕ-ಪಾತಕಗಳನ್ನು ಆಚರಿಸಬಾರದು ಎನ್ನುತ್ತದೆ 'ಗುರುವಚನ'. ಗರ್ಭದಿಂದೊಗೆದ ಮಗುವಿಗೆ ಶಿವಮಂತ್ರ

ಸ್ಮರಣೆಯಿಂದ ಭಸ್ಮ ಲಿಂಗಧಾರಣೆಗಳಾದ ಮೇಲೆ ಪಾತಕವಿಲ್ಲ. ಜನನ ಸೂತಕ ಕರ್ಮ, ಬಾಲಗ್ರಹ ಕಣಿ ಜ್ಯೋತಿಷ್ಯ ಮುಂತಾದುವು ಅನಿಷ್ಟಕಾರಕ. ಇವುಗಳನ್ನು ನಂಬಿ ಆಚರಿಸುವವನು ಹೀನ ನರಕಿಯುವ ಭವಿ ಅವಗಾಚಾರವಿಲ್ಲ' ಎಂದು ಅಂಧಶ್ರದ್ಧೆ ಮೂಢ ನಂಬಿಕೆಗಳನ್ನು ಕಟುವಾಗಿ ಖಂಡಿಸಲಾಗಿದೆ.

ಪಂಚಾಂಗ ಕೇಳುವವರನ್ನು ಟೀಕಿಸುವ ಒಂದು ಹಾಡಿನಲ್ಲಿ ಕೆಲವು ಪೌರಾಣಿಕ ವ್ಯಕ್ತಿಸಂಗತಿಗಳನ್ನು ವಿಡಂಬಿಸುವ ರೀತಿ ವಿವಿಧ ಚಿತ್ರಗಳ ಸರಮಾಲೆಯಾಗಿದೆ.

ಅಣ್ಣಾ ನೀ ಕೇಳೋ ಪಂಚಾಂಗವ । ಕೇಳಿ–  
ದಣ್ಣಗಳೆಲ್ಲರ ಭಂಗವ ॥"

ವಶಿಷ್ಠ ಮುನಿಯು ಸಮ್ಮುಖದಲ್ಲಿಯೇ ರಾಮ ಸೀತೆಯರಿಗೆ ಲಗ್ನವಾಯಿತು–ಸೀತೆಯನ್ನು ರಾವಣ ಒಯ್ದ–ರಾಮನಿಗೆ ವನವಾಸವಾಯಿತು.

ಶುಭವೇಳೆ ಕೇಳಿದ ಬ್ರಹ್ಮನಿಗೆ ಶಿವನಿಂದ ಅವಮಾನ.

ಪಂಚಾಂಗವನ್ನು ಮಾನ ಮನ್ನಣೆಯಿಂದ ಕೇಳಿದ ದೇವೇಂದ್ರನಿಗೆ ಮುನಿಶಾಪ–ತನುವೆಲ್ಲ ಯೋನಿ.–

ಮನ್ಮಥ, ಶುಭ ದಿನ ತಿಥಿಗಳನ್ನು ಕೇಳುತ್ತಲೇ ಇದ್ದ– ಅವನು ಶಿವನ ಹಣೆಗಣ್ಣಿಗೆ ಪಕ್ಕಾಗಿ ಉರಿದುಹೋದ.

ತಿಥಿ ಯೋಗ ಕರಣ, ಶುಭನಕ್ಷತ್ರಗಳನ್ನು ವಿಚಾರಿಸಿ ಯೋಜಿಸಿದ ದಕ್ಷಬ್ರಹ್ಮನ ಯಜ್ಞವನ್ನು ವೀರಭದ್ರ ಸೂರೆಮಾಡಿದ.

ಕಷ್ಟಕರ್ಮ ನೀಗಬೇಕೆಂದು, ನಿಷ್ಠೆಯಿಂದ ಪಂಚಾಂಗ ಕೇಳಿದ ಪಾಂಡವರಿಗೆ ದೇಶಭ್ರಷ್ಟರಾಗುವ ಪ್ರಸಂಗ ಬಂದಿತ್ತು.

ಇದೆಲ್ಲ ವೀರಶೈವ ಆಚಾರಕ್ಕೆ ಸಲ್ಲದು. ಇವುಗಳನ್ನು ನಂಬಲಾಗದು; ಆಚರಿಸಲಾಗದು. ಲಿಂಗದಲ್ಲಿ ನಿಷ್ಠೆಯಿಟ್ಟು ದೃಢಭಕ್ತಿಯಿಂದ ಮಾಡುವ ಕಾರ್ಯ, ವ್ಯವಹಾರಗಳನ್ನು ಯಾವ ದಿನ ಯಾವ ಸಮಯ ಆರಂಭ ಮಾಡಿದರೂ ಅದೇ ಶುಭದಿನ; ಅದೇ ಶುಭಮುಹೂರ್ತ.

ಹೀಗೆ ಬಸವಲಿಂಗ ಶರಣರು ದಿನನಿತ್ಯದ ಕಾರ್ಯಕಟ್ಟುಗಳಲ್ಲಿ ವ್ಯವಹಾರಗಳಲ್ಲಿ ಬೇರೂರಿದ ಅಂಥ ನಂಬಿಕೆಗಳನ್ನು ಸಾಮಾನ್ಯರ ವಾದ ತರ್ಕಗಳಿಗೂ ನಿಲುಕುವ ಹಾಗೆ ಸಕಲರ ಮನಸ್ಸಿಗೆ ನಾಟುವ ಹಾಗೆ ವಿಡಂಬಿಸುತ್ತಾರೆ.

ಮೈಲಾರದಲ್ಲಿ ನಡೆಯುವ ಮೈಲಾರಲಿಂಗನ ಜಾತ್ರೆಯ ಪ್ರಭಾವ ಪರಿಣಾಮಗಳು ಬಸವಲಿಂಗ ಶರಣರ ಚಿತ್ತದಲ್ಲಿ ಆಳವಾಗಿ ಮೂಡಿವೆ. ಈ ಜಾತ್ರೆಯನ್ನು ತಮ್ಮ ಒಂದು ರಚನೆಗೆ ವಸ್ತುವಾಗಿ ಆಯ್ದುಕೊಂಡ ಶರಣರು ಅಧ್ಯಾತ್ಮದ ಸ್ವರೂಪ, ದಿವ್ಯಾನುಭಾವದ ಬೆಡಗು ಬೆರಗುಗಳನ್ನು ಜಾತ್ರೆಯ ಪರಿಕರ ಪರಿಸರಗಳಿಗೆ ಉಪಮಿಸಿ ವಿವರಿಸಿರುವುದು ಕುತೂಹಲಕಾರಿಯಾಗಿದೆ. ಮೈಲಾರ ಲಿಂಗ ಜಾತ್ರೆ ನಡೆದಿರುವುದೇನೋ ನಿಜ. ಆದರೆ ಇದರ ಒಳಗುಟ್ಟು ಬೇರೇ ಇದೆ.

'ನೋಡಿರಮ್ಮ ಮೈಲಾರ ಲಿಂಗನ ಜಾತ್ರೆಯಾಗುತಿದೆ
ನಾಡ ಜನರಿಗೆ ತಿಳಿಯದು ಇದರ ಗೋಪ್ಯ ಬೇರಿದೆ' ॥

ಇದರ ತೇರು 'ಘನತೇರು'. ಅದು ಧರೆಯಾಕಾಶಕೆ ಸೋಂಕಿಲ್ಲದ ಮರದಿಂದ ರೂಪಿತಗೊಂಡಿದೆ. ಪರೀಕ್ಷಿಸಿ ನೋಡಿದರೆ ನವನೆನೆಗಳ ಕೀಲು ಕಾಣುತಿದೆ. ಹುರಿಗೂಡಿದ ಮಿಣಿ ಹತ್ತರಿಂದ ಬಿಗಿದೊಪ್ಪಿ ತೋರುತ್ತಿದೆ. ಗೊರವ ಮಂಡಲದತ್ತ ನೋಡಲು ಕಳಶ ಹೊಳೆಯುತ್ತಿದೆ.

ಅಂಗವೇ ತೇರು. ಸೋಂಕಿಲ್ಲದ ಮರವೇ ಲಿಂಗ. ಅಂಗ ಲಿಂಗ ಸಂಬಂಧದಿಂದಾಗಿ ಇದು 'ಘನ ತೇರು'! ನವಲಿಂಗ - ಆಚಾರಲಿಂಗ. ಗುರುಲಿಂಗ. ಶಿವಲಿಂಗ. ಜಂಗಮಲಿಂಗ. ಪ್ರಸಾದ ಲಿಂಗ ಮತ್ತು ಇಷ್ಟಲಿಂಗ. ಪ್ರಾಣಲಿಂಗ. ಭಾವಲಿಂಗಗಳ - ಸಕೀಲ ಸಂಬಂಧವನ್ನು, ದಶವಾಯುಗಳ - ಪ್ರಾಣ, ಅಪಾನ, ವ್ಯಾನ, ಉದಾನ ಸಮಾನ, ನಾಗ, ಕೂರ್ಮ, ಕೃಕರ ದೇವದತ್ತ, ಧನಂಜಯ - ಮೂಲಕ ಹುರಿಗೊಳಿಸಿ ಬಿಗಿಯಲಾಗಿದೆ. ಅದರಿಂದ ಗೊರವಮಂಡಲ - ಶಿವಪ್ರಕಾಶ - ಲಿಂಗದ ಮಹಾ ಬೆಳಗು - ಕಳಶವಾಗಿ ಬಯಲಲ್ಲಿ ತುಂಬಿದೆ.

ತೇರಿಗೆ ಮೂವತ್ತಾರು ಪಟಗಳು - ಒಂಬತ್ತು ಬಾಗಿಲು. ಬತ್ತಿ ತೈಲಗಳಿಲ್ಲದೆ ಬೆಳಗುವ ಜ್ಯೋತಿ.

ಮೂವತ್ತಾರು ಪಟ ಷಟ್‌ಸ್ಥಲದ ತಾತ್ತ್ವಿಕ ಭಾಗದ ಸಂಕೇತ.

ಇದರಲ್ಲಿ ೧೧ ಲಿಂಗ ತತ್ತ್ವಗಳು: ೨೫ ಅಂಗ ತತ್ತ್ವಗಳು. ಲಿಂಗತತ್ತ್ವ ಉಪಾಸ್ಯ - ಅಂಗತತ್ತ್ವ ಉಪಾಸಕ. ಅಂಗನು ಲಿಂಗವಾಗಿ ಲಿಂಗವನ್ನು ಪೂಜಿಸುತ್ತಾನೆ. ಇಂಥ ಸಾಂಕೇತಿಕ ರಥದ ವರ್ಣನೆ ಅಪೂರ್ವವಾಗಿದೆ.

ಮಲತ್ರಯಗಳನ್ನು ಕಳೆದುಕೊಂಡು 'ಮಲಾಸುರ ದೈತ್ಯನ ಕೊಂದಾನಂದ' ಕೂಡಿ ಬಹುನಾದ ಕೇಳಿ ಮೇಳಾದ ಸಾಲು ದೀವಿಗೆಯ ಬೆಳಗಿನಲ್ಲಿ ರಥ ಸಾಗುತ್ತಿದೆ.

ೀಗೆ 'ಧರೆಯಾಕಾಶಕೆ ಮರ ಸೋಂಕದ ಘನತೇರು ಕಾಣುತಿದೆ
ಪರಿಕಿಸಿ ನೋಡಲು ನವನೆನೆಗಳ ಕೀಲೊಂದು ಕಾಣುತಿದೆ
ಹುರಿಗೂಡಿದ ಮಿಣಿ ಹತ್ತರಿಂದ ಬಿಗಿದೊಪ್ಪಿ ತೋರುತಿದೆ
ಗೊರವಮಂಡಲದತ್ತ ನೋಡಲುರ ಕಳಶವೆಸೆಯುತಿದೆ...

'ನೋಡಿರಮ್ಮ ಮೈಲಾರಲಿಂಗನ ಜಾತ್ರೆಯಾಗುತಿದೆ
ನಾಡಜನರಿಗೆ ತಿಳಿಯದು ಇದರ ಗೋಪ್ಯ ಬೇರೆ'.

'ಜಾತ್ರೆ'ಯೊಂದನ್ನು ಪ್ರಪಂಚದ ಬದುಕಿನ ವ್ಯಾಪ್ತಿಗೆ, ೇರನ್ನು ಅಂಗಲಿಂಗ ಸಂಬಂಧ ಸಾಧನೆಗೆ ಪ್ರತೀಕವಾಗಿ ವಿವಿಧ ಂಕೇತಾರ್ಥದ ಒಂದು ಪ್ರತಿಮೆಯನ್ನೇ ಈ ಹಾಡು ಕಣ್ಮುಂದೆ ತ್ತಿ ನಿಲ್ಲಿಸುತ್ತದೆ. ಬಸವಲಿಂಗ ಶರಣರ ಹಾಡುಗಳಲ್ಲಿ ಇಂಥ ಚನೆಗಳು ವಿರಳ.

ಕನ್ನಡ ನಾಡಿನ ಜನಪದ ಗುಂಪುಗಳಲ್ಲಿ 'ಸಾರುವಯ್ಯ' ಳದು ಒಂದು ವಿಶಿಷ್ಟ ಸಮುದಾಯ. ಬಹುಶಃ ಶಿವಶರಣರ

ಕಾಲದಿಂದ ಮೂಡಿ ಬಂದಿರಬಹುದಾದ 'ಕಾಲಜ್ಞಾನ'ವನ್ನು ಸಾರಿ ಹೇಳುವ ಈ ಪರಂಪರೆಯಲ್ಲಿ ಇಂದಿಗೂ ಮೈಲಾರ ಬಸವಲಿಂಗ ಶರಣರ 'ಕಣಿಯ ಕೇಳಿರಣ್ಣ' ಎನ್ನುವ ಹಾಡು ಜನಪ್ರಿಯವಾಗಿದೆ. ಈ ಹಾಡಿನ ಕೆಲವು ನುಡಿಗಳು ಮೇಲುನೋಟಕ್ಕೆ, ಮೋಜಿನ ರಚನೆಗಳಾಗಿ ಕಂಡರೂ ಅವುಗಳ ಕಾಲಜ್ಞಾನದ ಅರ್ಥ ಬೆರಗುಗೊಳಿಸುತ್ತದೆ.

'ಕಣಿಯ ಕೇಳಿರಣ್ಣಗಳಿರಾ । ಕಣಿಯ ಕೇಳಿರೋ ಗುರುಪ-
ನಣುಗ ಧರೆಯೊಳೊರೆಯ ಬಂದ । ಕಣಿಯ ಕೇಳಿರೋ ॥
.........................................
ತಿಣಿಯೊಳೊಗೆದು ಶರಣರಡಿಗೆ । ಕಣಿಯ ಕೇಳಿರೋ ।
ಮಣಿದು
ಮಣಿಯ ಪೆಸರ ಪಡೆದಳಬಲೆ । ಕಣಿಯ ಕೇಳಿರೋ
ಅಣಿಮುಗರಿಯ ಮಹಿಮೆಯಿಂದ । ಕಣಿಯಕೇಳಿರೊ ।
ಜಗವ
ತೃಣವ ಮಾಡಿ ದಹಿಸುತಾಳೆ ಕಣಿಯ ಕೇಳಿರೋ

'ಮಣಿಯಪೆಸರ ಪಡೆದಳಬಲೆ' ಎನ್ನುವುದಕ್ಕಿರುವ ಇಂದ್ರ ನೀಲಮಣಿಯ ಹೆಸರಿನ ಸ್ತ್ರೀ ಎಂದು ಅರ್ಥವಿಸಿ 'ಜಗವ ತೃಣವ ಮಾಡಿ ದಹಿಸುತ್ತಾಳೆ' ಎನ್ನುವುದರ ಹಿನ್ನೆಲೆಯನ್ನು ಹಿಂಜಿದರೆ ಒಂದು ನಿಮಿಷ ದಂಗಾದರೆ ಆಶ್ಚರ್ಯವಿಲ್ಲ. ಏಕೆಂದರೆ 'ಮಾಯೆ' ಜೀವನದಲ್ಲಿ ಸದಾ ಇದ್ದು ಎಲ್ಲರನ್ನು ದಹಿಸುವವಳೇ.

ನಂಬುವವರಿಗೆ ಮೈಲಾರ ಶರಣರ ಈ ಮುಂದಿನ ಕಣಿ ಕಳವಳಕಾರಕವಾಗಿ ತೋರಬಹುದು: 'ಮಾಯೆ'ಯ ಪರಂಪರಾಗತ ಪರಿಕಲ್ಪನೆಯನ್ನು ಎತ್ತಿಕೊಂಡು 'ಒಬ್ಬ ಯುವತಿಗೆ' ಹೋಲಿಸಿರುವುದು ಪ್ರಾಪಂಚಿಕ ಜೀವನದ ವಿಫಲತೆಯ ವಿಡಂಬನೆಯಾಗಿದೆ.

ನವಖಂಡ ಪೃಥ್ವಿಯನ್ನು ಕಣಿಯ ಕೇಳಿರೋ । ಒಬ್ಬ
ಯುವತಿ ಆಳುತಾಳೆ ಮುಂದೆ । ಕಣಿಯ ಕೇಳಿರೋ
ಅವಳ ಕಾಲ ಮಹಿಮೆಯಿಂದ । ಕಣಿಯ ಕೇಳಿರೋ ಪಾಪ
ನಿವಹ ಹೆಚ್ಚುತ್ತೈತಿ ಮುಂದೆ । ಕಣಿಯ ಕೇಳಿರೋ ।

ಚಿತ್ರದುರ್ಗದ ಗತ ಇತಿಹಾಸದ ಕಣಿಯನ್ನು ಒಳಗೊಂಡ ನುಡಿ ಕುತೂಹಲಕಾರಿಯಾಗಿದೆ:

'ಶತ್ರು ತಮಗೆ ಮಾರುಮಲೆತು । ಕಣಿಯ ಕೇಳಿರೋ ।
ನಿಂದ
ಚಿತ್ರಕಲ್ಲದುರ್ಗ । ತಾನು । ಕಣಿಯಕೇಳಿರೋ
ಮಿತ್ರರಾಜನು ತಾ ಬರಲು । ಕಣಿಯ ಕೇಳಿರೋ। ನೋಟ
ಮಾತ್ರದಲ್ಲಿ ಹೋಗುತದೆ ಕಣಿಯ ಕೇಳಿರೋ.

ಪಾರಮಾರ್ಥ – ತತ್ತ್ವಜ್ಞಾನ. ದರ್ಶನ – ವನ್ನು ಕುರಿತು ಇಂದು ನಿರ್ಲಕ್ಷ್ಯ ಮತ್ತು ಅನಾದರಗಳು ಹೆಚ್ಚುತ್ತಿವೆ. ಜೊತೆಗೆ ಅಸತ್ಯ. ಮೋಸ. ವಿಲಾಸ ಭೋಗಗಳ ಬೆನ್ನುಹತ್ತಿ ಬದುಕಿನಲ್ಲಿ ಉನ್ನತ ಮೌಲ್ಯಗಳು ಜಾರಿ, ಜೊಳ್ಳು ಮೌಲ್ಯಗಳ ಉಬ್ಬರವೇ ಅಧಿಕವಾಗಿ ಕಂಡುಬರುತ್ತದೆ.

ಮೈಲಾರ ಶರಣರ ಕಣಿಯ ಒಂದು ನುಡಿ ಸಮಕಾಲೀನ ಜೀವನಕ್ಕೆ ಸಂಬದ್ಧವಾಗಿದ್ದು ಸಮಾಜದ ಗಂಭೀರ ಚಿಂತನೆಗೆ ಪ್ರೇರಕವಾಗಿದೆ.

ನಿತ್ಯಸತ್ಯವಾಗಿರುವುದು ಪಾರಮಾರ್ಥ; ಭೋಗ ವಿಲಾಸಗಳು ಮಿಥ್ಯ. ಹೀಗಿರುವಾಗ—

'ತಥ್ಯಪಾರಮಾರ್ಥಮಿಥ್ಯ। ಕಣಿಯ ಕೇಳಿರೋ । ಎಂದು
ಮಿಥ್ಯಭೋಗ ತಥ್ಯವೆಂದು। ಕಣಿಯ ಕೇಳಿರೋ ।
ತೊತ್ತು ಓಲೆ ಕಂಠಪಿಡಿದು। ಕಣಿಯ ಕೇಳಿರೋ । ಈ
ಪೃಥ್ವಿಯಲ್ಲಿ ಲಿಖಿಸುತಾಳೆ ಕಣಿಯ ಕೇಳಿರೋ–

ನಿತ್ಯ ಸತ್ಯವಾಗಿರುವ ಪಾರಮಾರ್ಥವೇ ಮಿಥ್ಯ. ಮುಸಿಯಾಗಿರುವ ಭೋಗಗಳೇ ತಥ್ಯ ಎಂದು ಸಾರಿ ಅದನ್ನು ಒಬ್ಬ ತೊತ್ತು ಪೃಥ್ವಿಯಲ್ಲಿ ಬರೆಸುತ್ತಾಳಂತೆ.

ಮೈಲಾರ ಜಾತ್ರೆಯಲ್ಲಿ ಇಂದಿಗೂ ಕಾರಣಿಕ ಹೇಳುವ ಪರಂಪರೆ ರೂಢಿಯಲ್ಲಿದೆ. ಅಂಥ ಒಂದು ಕಾರಣಿಕದ ವಸ್ತುವನ್ನು ಈ ರಚನೆಗೆ ಬಳಸಿಕೊಂಡಿರುವ ಇಂಥ ರಚನೆಗಳು ಕನ್ನಡ ಹಾಡುಗಬ್ಬದ ವಿಶಿಷ್ಟ ಕಾಣಿಕೆಗಳಾಗಿವೆ.

ಶಿವಯೋಗದ ಅನುಷ್ಠಾನ ಕ್ರಮ – ಸಹಸ್ರಾರದಳ ಚಕ್ರದ ನೆಲೆಯಾದ–ಕಾಯ–ಮಸ್ತಕ ಸಂಬಂಧಗಳನ್ನು ಅನುಸಂಧಾನ ಅರ್ಚನೆಗಳ ಮೂಲಕ ಚಿಂತನೆ ಅರಳಿ, ಬೆಳಗುವ ಮಹಾಬೆಳಗಿನ ನಿಬ್ಬೆರಗಿನ ಸಂಕೇತ 'ಸಾಲು ಚಕ್ರದಳಕುಳದ ಸುಹಂಸನ' ಎನ್ನುವ ಹಾಡಿನ ವಸ್ತು.

'......ಮಮಕಾರಹುಂಕಾರಗಳ
ಬಿಟ್ಟು ಲಿಂಗಾಂಗದ ನಡೆನುಡಿಗಳ ದೃಢವಿಡಿದಾಚರಿಸೆ
ದಿಟ್ಟ ಹೃದಯ ಮುಖವಹ ಮಹಲಿಂಗ ವಿ-
ಶಿಷ್ಟ ಸಂತೃಪ್ತಿ ಪ್ರಸಾದವ ಭೋಗಿಸು
ತಷ್ಟಶತದ ಚೌಸಷ್ಟ ಜಪವನುರೆ ಜಪಿಸುವಮಹದೈಕ್ಯ'

ಜಪವಿರಲಿ ತಪವಿರಲಿ – ಎಲ್ಲವೂ ಲಿಂಗಾಂಗದ ಪರಿಶುದ್ಧ ನಡೆ ನುಡಿಗಳ ದೃಢವಾದ ಆಚರಣೆಯಲ್ಲಿ ಆವಿಷ್ಕಾರಗೊಳ್ಳಬೇಕು

ವೀರಶೈವ ಸೈದ್ಧಾಂತಿಕ ವಿವರಣೆಯ ಒಂದು ಕೋಷ್ಟಕ ದಂತಿರುವ ಇಲ್ಲಿಯ ಪದ್ಯವನ್ನು ನೋಡಬಹುದು :

'ಆರಯಲ್ಕೊಂದೆ ಮೂರಾದುದು
ಆರಾದುದು ಮೂವತ್ತಾರಾದುದು
ಬೀರುವ ಇನ್ನೂರು ಹದಿನಾರಾದುದು ಶತದಳದೊತ್ತಿನಗೆ
ತೋರುವ ಇಪ್ಪತ್ತೊಂದು ಸಾಸಿರದಾರು
ನೂರು ಜಪವೆ ತಾಂ ಷಡುಸ್ಥಲಬ್ರಹ್ಮದ
ಸಾರ ಸುಬೋಧೆಯ ಸದ್ಗುರು ಚೆನ್ನವೀರೇಶ್ವರ
ಜಯಸತತಂ

ವೀರಶೈವವ ಸಿದ್ಧಾಂತವನ್ನು ಶಿವಯೋಗ – ಲಿಂಗಾಂಗ ಯೋಗ ಎಂದು ಕರೆಯಲಾಗುತ್ತದೆ. ಜೀವ ಪರಮಾತ್ಮರ – ಲಿಂಗಾಂಗ ಸಾಮರಸ್ಯ – ಸಮರಸವೇ ಶಿವಯೋಗ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಲಿಂಗಾಂಗ ಯೋಗದ ಪರಮ ಶ್ರೇಷ್ಠತೆಯನ್ನು ವಿವರಿಸುವ ಒಂದು ವಚನ ಹೀಗಿದೆ :

'ಲಂಬಿಕಾ ಯೋಗಿಗಳ ಡೊಂಬರಿಗೆ ಸರಿಯೆಂಬೆ: ಹಠ ಯೋಗಿಗಳ ಆಟಮಟಕಾರರೆಂಬೆ; ಅಷ್ಟಾಂಗ ಯೋಗಿಗಳ ಕಷ್ಟ ಕರ್ಮಿಗಳೆಂಬೆ; ಪವನಯೋಗಿಗಳ ಪ್ರಪಂಚಿಗಳೆಂಬೆ: ಲಯ ಯೋಗಿಗಳ ನಾಯಿಗಿಂತ ಕಡೆಯೆಂಬೆ: ಅದೇನು ಕಾರಣವೆಂದರೆ ಲಯಯೋಗವೆಂಬುದು ನಾಸಾದರುಶನದಲ್ಲಿ ಪರ್ಿಸುವುದಾಗಿ. ಅದನು ಶಿವಯೋಗಿಗಳು ಬಲ್ಲರು. ಮಂತ್ರಯೋಗವೆಂಬುದು ಸಮಸಂದೇಹಕಿಕ್ಕಿಕೊಲುತಿರ್ಪುದು. ಅದೇನು ಕಾರಣವೆಂದರೆ ಮಂತ್ರವೇ ಲಿಂಗ, ಲಿಂಗವೇ ಮಂತ್ರವೆಂದರಿದು ಲಿಂಗಸನಹ ಸಂಬಂಧಿಸಿಕೊಳಲರಿಯದೆ, ಲಿಂಗವಿರಹಿತರಾಗಿ ಮಾಡುತಿಪ್ಪ ರಾಗಿ ಅದನ್ನು ಅಂಗಲಿಂಗ ಸಂಬಂಧಿಗಳು ಮೆಚ್ಚರು ನೋಡಾ. ಅದೇನು ಕಾರಣವೆಂದರೆ ಕೆಲವು ಶೈವರುಗಳು ಮಾಡುವರಾಗಿ ರಾಜಯೋಗವೆಂಬುದು ಗಾಜು ಗೋಜು ನೋಡಾ: ಅದನು ಲಿಂಗವಿರಹಿತವಾಗಿ ಜ್ಞಾತೃ ಜ್ಞಾನ, ಜ್ಞೇಯ ಒಂದಾದಲ್ಲಿಯೇ ಯೋಗವೆನುತಿಪ್ಪರಾಗಿ, ಇವು ಒಂದೂ ಲಿಂಗಾಂಗ ಯೋಗದ ಹೆಜ್ಜೆಯಲ್ಲ......'೧

ಹೀಗೆ ಇತರ ಯೋಗಗಳಿಗಿಂತ ಶಿವಯೋಗವನ್ನು ಎತ್ತಿ ಹಿಡಿದ ಸಿದ್ಧಲಿಂಗ ಶಿವಯೋಗಿಗಳ ಮಾರ್ಗ ಬಸವಲಿಂಗ ಶರಣರ 'ಶಿವಾನುಭವದರ್ಪಣ'ದ ತಾತ್ತ್ವಿಕ ವಿವರಣೆಗೆ ಪ್ರೇರಕ.

---

೧. ಸಿದ್ಧೇಶ್ವರ ವಚನ– ಪ್ರಾಣಲಿಂಗಿಸ್ಥಲ ೨೬ ನೆಯ ವಚನ

'ಒಂದೇ ವಸ್ತು ತನುಮನಭಾವಂಗಳಲ್ಲಿ ಇಷ್ಟ ಪ್ರಾಣ ಭಾವ'[೧] ಆಯಿತು ಎನ್ನುವುದು ತೋಂಟದ ಸಿದ್ಧಲಿಂಗ ಶಿವಯೋಗಿಗಳ ದಿವ್ಯಾನುಭಾವದ ನಿಲವು.

'ಚೈತನ್ಯವಸ್ತುಪರಮ ಚಿತ್ಕಳೆಯು' – ಒಂದು: ಅದು, ಸ್ಥೂಲ ಸೂಕ್ಷ್ಮ ಕಾರಣ ಶರೀರಗಳ ಮಲತ್ರಯ–ಆಣವ ಮಾಯಾ. ಕಾರ್ಮಿಕ–ಗಳನ್ನು ಕಳೆದಕೊಂಡು, ಮೂರು ಅಂಗವಾಯಿತು – ಮೂರು ಅಂಗಗಳಿಗೆ ಮೂರು ಲಿಂಗಗಳ ಸಂಬಂಧವಾಗಿ ಆರಾಯಿತು: ಆರು ಅಂಗಸ್ಥಲ – ಭಕ್ತ, ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣಐಕ್ಯ–ಗಳಿಗೆ ಆರು ಲಿಂಗ– ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ–ಗಳ ಸಕೀಲಸಂಬಂಧ. ಒಂದೊಂದು ಸ್ಥಲಕ್ಕೂ ಆರರಂತೆ ಆರು ಮೂವತ್ತಾರು – ಹೀಗೆ ಈ ಕ್ರಮ ೩೬ರಲ್ಲಿ ಒಂದೊಂದಕ್ಕೂ ಆರರಂತೆ ಇನ್ನೂರ ಹದಿನಾರು – ಮತ್ತೆ ಒಂದೊಂದಕ್ಕೆ ನೂರರಂತೆ ಇಪತ್ತೊಂದು ಸಾವಿರ ಆರುನೂರು ದಳಗಳು.

ಸೈದ್ಧಾಂತಿಕ ಕಾಗುಣಿತದ ಇತಿಮಿತಿ ಅನುಭಾವಗಳು ಏನೇ ಇರಲಿ ಭಕ್ತಿಪ್ರಧಾನವಾದ, ಲಿಂಗವಿಡಿದು ಲಿಂಗವಾಗುವ ಈ ಲಿಂಗಯೋಗದ ಮಹಿಮೆಯನ್ನು ತಮ್ಮ ಶಿವಯೋಗ ದರ್ಪಣದಲ್ಲಿ ಪ್ರತಿಬಿಂಬಿಸಿದ ಬಸವಲಿಂಗ ಶರಣರ ಲಿಂಗಾನುಸಂಧಾನದ ದಿವ್ಯಾನುಭಾವ ವಿರಳವಾಗಿದೆ: ಜಿಜ್ಞಾಸುಗಳ ಕೈಗನ್ನಡಿಯಾಗಿದೆ.

---

೧. ಸಿದ್ಧೇಶ್ವರ ವಚನ ಪ್ರಾಣಲಿಂಗಿಸ್ಥಲ ವಚನ ೩೨

ಬಸವಾದಿ ಪ್ರಮಥರಿಂದ ಮೊದಲುಗೊಂಡು ನಿಜಗುಣ, ತೋಂಟದ ಸಿದ್ಧಲಿಂಗಯತಿ. ಸರ್ಪಭೂಷಣ ಮಗ್ಗೆಯ ಮಾಯಿ ದೇವ ಮುಂತಾದ ಶಿವಯೋಗಿಗಳ ಪ್ರಭಾವ ಪ್ರೇರಣೆಗಳು ಬಸವಲಿಂಗ ಶರಣರ ಈ ಎಲ್ಲ ರಚನೆಗಳಲ್ಲಿ ಹೆಜ್ಜೆ ಹೆಜ್ಜೆಗೆ ಸ್ಫುಟವಾಗಿ ಮೂಡಿವೆ.

ಲಿಂಗಪೂಜಾ ವಿಧಾನ :

ಲಿಂಗಪೂಜೆಯನ್ನು ವಿಧಿವತ್ತಾಗಿ ಮಾಡುವ ಪ್ರತಿಯೊಂದು ಕ್ರಿಯೆಯನ್ನು ಸುಮಾರು ೫೭ ಕಂದ ಪದ್ಯಗಳಲ್ಲಿ ನಿರೂಪಿಸಲಾಗಿ ರುವ ಚಿಕ್ಕ ಕೃತಿ. ಭಾವನೋಪಚಾರದಲ್ಲಿ ಗುರು ಮಹಿಮೆ ಯನ್ನು ಸ್ತುತಿಸಿದ ಬಸವಲಿಂಗ ಶರಣರು ಸಂಕಲ್ಪ ಮೊದಲು ಗೊಂಡು ೫೨ ಕ್ರಿಯಾವಿಧಿ – ನೀರಾಜನ ಬೆಳಗುವವರೆಗೆ ಐವತ್ತೆರಡು ಕಂದ ಪದ್ಯಗಳನ್ನು ರಚಿಸಿ ಒಂದೊಂದೂ ಕ್ರಿಯೆಯ ವೈಶಿಷ್ಟವನ್ನು ಎತ್ತಿ ಹೇಳಿದ್ದಾರೆ. ಪೂಜಾಸಮಯದ ಈ ವಿಧಿ ಗಳು ಒಂದು ಧಾರ್ಮಿಕ ಚೌಕಟ್ಟಿನಲ್ಲಿ ವಿವರಿಸಲ್ಪಟ್ಟಿದ್ದರೂ ಅಲ್ಲಲ್ಲಿ ಅನುಭಾವದ ಸಿಲವು ಹೊಮ್ಮಿ ಆ ಆ ಕ್ರಿಯೆಗಳ ಚಿತ್ತ ಸ್ಥಿತಿಯ ಹಿರಿಮೆಯನ್ನು ಹೇಳುವಲ್ಲಿ ಸಫಲವಾಗಿವೆ.

ಧ್ಯಾನವೆಂದರೆ ಹೇಗಿರುತ್ತದೆ ?

ಧ್ಯಾನ :

'ಮಾನಸ ವಾಚಕ ಕಾಯಕ

ಏನುವ ಸೋಂಕದಿಹ ಬಚ್ಚಬರಿಯರಿವದು ತಾಂ ॥

ತಾನುತಾನಾದ ವರಸು
ಜ್ಞಾನವೆ ಕರಿಗೊಂಡ ಮೌನಮದು ತದ್ಧ್ಯಾನಂ'

ಮನಸ್ಸು, ಮಾತು, ಶರೀರಕ್ಕೆ ಸಂಬಂಧಿಸಿದ ಯಾವುದೇ ವಿಷಯಗಳಲ್ಲಿ ಸಿಲುಕದಂಥ ಬಚ್ಚಬರಿಯ ಅರಿವು: ಆ ಅರಿವೇ ತಾನು ಎನ್ನುವ ಶುದ್ಧ ಜ್ಞಾನವಾಗಿ ಮೌನವೇ ಚಿತ್ತದ ನೆಲವಾದಾಗ ಅದು ಧ್ಯಾನ.

ಆಸನ :

ಲಿಂಗಕ್ಕೆ ಹಸ್ತವೇ ಸಿಂಹಾಸನ. ಸ್ವಯವೇ ಮಂಚ, ಸುಜ್ಞಾನ ಹಾಸಿಗೆ. ಭಯಭಕ್ತಿಕಿಂಕರತೆಯೇ ಚೌಮಣಿ, ನಯನವೇ ನಂದಾದೀವಿಗೆ.

ಶರಣಸತಿ ಲಿಂಗಪತಿಭಾವದಿಂದ ನೆರವೇರುವ ಎಲ್ಲ ಕ್ರಿಯೆಗಳಲ್ಲಿ ಉಪಾಸ್ಯ ವಸ್ತು 'ಲಿಂಗ'ದ ಸೀಮಾತೀತ ಸ್ವರೂಪದ ವರ್ಣನೆ ಅನೇಕ ಪದ್ಯಗಳಲ್ಲಿ ಹೊಮ್ಮಿದೆ.

ಒಳ್ಳೆಯ ಶರಣರು ಸುಳ್ಳಿನ ಸೀಮೆ ಕಳ್ಳರ ಕಣಿವೆಗಳನ್ನು ಮೆಟ್ಟುವವರಲ್ಲ. ಅಂಥವರು ಲಿಂಗೋಪಚಾರ ಮಾಡುತ್ತ ಅನುಸಂಧಾನ ಮಾಡಬೇಕು. ಏಕೆಂದರೆ ಲಿಂಗ ಎನ್ನುವುದು ಅಹಂಕಾರಾದಿ ದುಷ್ಟಗುಣದ ಮದಗಜಕೆ ಸಿಂಹವಿದ್ದಂತೆ; ಬಹಿರಂಗದ ಅರುವೆಯ ಮಾಲಿನ್ಯ ಕಳೆದು ಅಹಂಕಾರದ ಕಳೆ ಕಿತ್ತು ಎಲ್ಲವನ್ನು ಹಸನು ಮಾಡುವ ವಿಧಾನ ತಿಳಿಯಬೇಕು. ತನ್ನಲ್ಲಿರುವ

ಶಾಂತಗುಣವೇ ಶುದ್ಧಜಲವೆಂದು ಭಾವಿಸಿ ಅಗ್ಗವಣಿ ಎರೆಯ ಬೇಕು. ಓಗೆ ಲಿಂಗಕ್ಕೆ ಶರಣೆಂದು ಆರತಿ ಬೆಳಗಬೇಕು.

ಈ ಪೂಜಾಕ್ರಮದಲ್ಲಿ ಬಹಿರಂಗದ ಕ್ರಿಯೆಗಳನ್ನು ಕ್ರಮೋಕ್ತವಾಗಿ ಹೇಳಿದ್ದರೂ ಅಂತರಂಗದ ಅರಿವಿನ ಬೆಳಗಿನ ನಲ್ಲಿಯೇ ಈ ಎಲ್ಲ ವಿಧಿಗಳು ಬೆಳೆಯಬೇಕು ಎನ್ನುವುದನ್ನು ಬಸವಲಿಂಗ ಶರಣರು ಸೂಚಿಸಿರುವುದನ್ನು ಗಮನಿಸಿದರೆ, ಅವರ ದೃಷ್ಟಿಯಲ್ಲಿ ಲಿಂಗಪೂಜೆ – ಕೇವಲ ಹೊರಗಣ್ಣಿಗೆ ತೋರುವ ಒಂದು ಶುಷ್ಕಕ್ರಿಯೆಯಾಗಿರದೆ – ಆತ್ಮವಿಕಾಸದ ದಿಕ್ಸೂಚಿಯಾಗಿ ರುವ ಅನುಸಂಧಾನವಾಗಿದೆ.

ವೀರಶೈವ ಧರ್ಮದ ತಿರುಳನ್ನು ಚೆನ್ನಾಗಿ ಅರಿತು. ಕ್ರಿಯೆ ಗಳ ಮೂಲಕ ಸಾಧಿಸಿ. ಇದು ಹೇಗೆ ವ್ಯಕ್ತಿವಿಕಾಸಕ್ಕೆ ಸಾಧಕ ಎನ್ನುವುದರ ಮಹತ್ತ್ವವನ್ನು ತಮ್ಮ ರಚನೆಗಳಲ್ಲಿ ಸರಳ ಮತ್ತು ಸರಸವಾಗಿ ತೋರಿಸಿದ ಬಸವಲಿಂಗ ಶರಣರು, ವೀರಶೈವ ತತ್ತ್ವ ಚರಣೆಯಲ್ಲಿ ಶ್ರದ್ಧೆಯಿರುವ ಸಹೃದಯನಿಗೆ ಪರಮ ಗುರು ವಾಗಿದ್ದಾರೆ.

ಮೈಲಾರದಲ್ಲಿ ನಡೆಯುವ. 'ಕಾರಣಿಕ' ಆ ಜಾತ್ರೆಯ ಒಂದು ಅತ್ಯಂತ ರೋಚಕ ಮತ್ತು ರೋಮಾಂಚಕ ಪ್ರಸಂಗ. 'ಕಾರಣಿಕ' ಹೇಳುವ ಮೈಲಾರಮಲ್ಲಯ್ಯನ ಪೂಜಾರಿ ಅಂದು ಪರಿಸೆಯ ಮಧ್ಯೆ ಬರುತ್ತಾರೆ. ಸಾಮಾನ್ಯವಾಗಿ ಹತ್ತು ಸಾವಿರಕ್ಕೂ ಮೀರಿ ಕೂಡುವ ಪರಿಸೆ. ಮಿತಿಮೀರಿದ ಸಪ್ಪುಗದ್ದಲ. ನಿಶ್ಚಿತ ಸ್ಥಳದಲ್ಲಿ ಬಂದುನಿಂತ ಪೂಜಾರಿ ಸುಮಾರು ೧೨–೧೪ ಅಡಿ

ಉದ್ದದ ಬಿಲ್ಲನ್ನು ಏರಿ ನಿಂತು ಸುತ್ತಲೂ ಒಮ್ಮೆ ದಿಟ್ಟಿಸಿ 'ಸದ್ದಲೇ' ಎಂದು ಗುಡುಗುತ್ತಾರೆ. ನೆಟ್ಟನೆ ಸುತ್ತಣ ಸದ್ದು ಹೆಪ್ಪುಗಟ್ಟಿದ ಮೌನ. ಆಗ ಭಾವಾವೇಶ ತುಂಬಿದ ಆ ವ್ಯಕ್ತಿ ಮೈಲಾರಲಿಂಗನ ಪ್ರೇರಣೆಯಂತೆ ಕಾರಣಿಕ ನುಡಿದು ಬಿಲ್ಲಿನ ತುದಿಯಿಂದ ಹಾಗೇ ಕೆಳಕ್ಕೆ ಧುಮುಕುತ್ತಾನೆ: ಅಲ್ಲಿ ನಿಂತ ಭಕ್ತರು ಆತನನ್ನು ಅಂತರದಲ್ಲಿಯೇ ಎತ್ತಿಹಿಡಿದು 'ಏಳುಕೋಟಿ ಏಳುಕೋಟಿ ಏಳುಕೋಟಿಗೋ' ಎಂದು ಉಗ್ಘಡಿಸುತ್ತಾರೆ. ಅಂಥ ಒಂದು ಕಾರಣಿಕ ಸನ್ನಿವೇಶದ ಹಾಡು. 'ನಂಬುವುದೆಮ್ಮ ಮೈಲಾರಲಿಂಗದ ಸೊಲ್ಲು ಕೇಳಿ ಕೇಳಿ !

ನಂಬುವುದೆಮ್ಮ ಮೈಲಾರಲಿಂಗದ ಸೊಲ್ಲು ಕೇಳಿಕೇಳಿ
ಡಂಭಕ ಮಾತಲ್ಲ ಕಾರಣಿಕನೆ ಬಲ್ಲ ಕೇಳಿ ಕೇಳಿ

ಮೈಲಾರ ಲಿಂಗನ ಸೊಲ್ಲು ಎಂದರೆ ಬೂಟಾಟಿಕೆಯ ನುಡಿಯಲ್ಲ. ಅದು ಪವಾಡ. ಅವತಾರ ಪುರುಷನ ಸಿದ್ಧನುಡಿ. ಇದನ್ನು ನಂಬಬೇಕು ಎನ್ನುತ್ತಾರೆ ಬಸವಲಿಂಗ ಶರಣರು.

ಕಾರಣಿಕದ ಈ ಹಾಡು ಕನ್ನಡ ಹಾಡುಗಬ್ಬದ ಪರಂಪರೆಗೇ ಒಂದು ವಿಶಿಷ್ಟವಾದ ಕೊಡುಗೆ.

'ಕಾರಣಿಕವ ನಮ್ಮ ಗೊರವಯ್ಯ ದಯವಿಟ್ಟು ಕೇಳಿ ಕೇಳಿ
ಸಾರುತ ಬರುವ ನೋಡಿತರ ಮಾರ್ಗವ ಬಿಟ್ಟು ಕೇಳಿ ಕೇಳಿ
ಮೀರಿದಾಚರಣೆಯುಳ್ಳವರೆಲ್ಲ ಕೇಳಿಕೇಳಿ
ಧಾರುಣಿಯ ಜನರಿಗೆ ತಿಳಿಯಬಾರದ ಗುಟ್ಟು ಕೇಳಿಕೇಳಿ'

ಶ್ರದ್ಧೆಯಿಂದ ಕೇಳಿದರೆ ಮಾತ್ರ ಇದರ ರಹಸ್ಯ ಹೊಳೆಯುತ್ತದೆ. ಇಲ್ಲವಾದರೆ ತಿಳಿಯದು. ಈ ಕೆಳಗಿನ ಕೆಲವು ನುಡಿಗಳ

ವಸ್ತು, ವಿವರಿಸುವ ರೀತಿ ಅದ್ಭುತವಾಗಿದ್ದು ಕೆಲವು ಕಡೆ ರೂಪ ಗೊಳ್ಳುವ ಆಧ್ಯಾತ್ಮಿಕ ಸಂಕೇತವುಳ್ಳ, ವಾಸ್ತವಿಕ ಸತ್ಯದ ಪ್ರತೀಕ ವಾಗಿರುವ ಪ್ರತಿಮೆಗಳು, ವಿಮರ್ಶಕನ ವಿಶೇಷ ಲಕ್ಷ್ಯ ಸೆಳೆಯು ತ್ತವೆ.

'ಕೋಣನ ಕೊಂಬಿನಲಿ ನೇಣು ಕಾಣಿಸುತಿದೆ ಕೇಳಿಕೇಳಿ
ನೇಣುವಿನ ಬಲೆಯೊಳು ಮೂಲೋಕವಡಗಿದೆ ಕೇಳಿಕೇಳಿ
ನೇಣು ಕೋಡುಗಳ ಕಿತ್ತೊಗೆಯಲು ಕಡುಬೇಗ ಕೇಳಿಕೇಳಿ
ಕೋಣನಳಿದು ಮುಕ್ತಿತಾಣವೆನಿಸುತಿದೆ ಕೇಳಿಕೇಳಿ'

ಕೋಣ ಅಹಂಕಾರಕ್ಕೆ ಸಂಕೇತ. ಕೊಂಬಿನಲಿ ಎನ್ನುವುದು ದುರಂಹಕಾರಕ್ಕೆ ಪ್ರತೀಕ. ನೇಣು ಎನ್ನುವುದು ಬಂಧನ. ಹೀಗೆ ಕೋಣ, ಕೊಂಬು, ನೇಣುಗಳು ಹಮ್ಮಿನ ಬಂಧನದ ಚಿತ್ರರೂಪ ಗಳು. ಹಮ್ಮಿನ ಬಲೆಯಲ್ಲಿ ಮೂರು ಲೋಕಗಳೂ – ಮಾನವ ದಾನವ, ದೇವ – ಅಡಗಿವೆ. ಅಹಂಕಾರವನ್ನು ಕಿತ್ತೆಸೆದರೆ ಬಂಧನ ಅಳಿಯುತ್ತದೆ. ಜೀವನ ಮುಕ್ತಿಯ ತಾಣವಾಗುತ್ತದೆ. ಜೀವ ಶಿವನಾಗುತ್ತಾನೆ. ಇಂಥ ಭಾವನೆಗಳಿಗೆ ವಚನಸಾಹಿತ್ಯವೇ ಪ್ರೇರಕವಾಗಿದೆ :

ಹತ್ತು ನಡೆವದಾರಿ ಗೊತ್ತಿನೊಳಗೆ ಒಂದು ಕೇಳಿಕೇಳಿ
ಸತ್ತ ಶವಕೆ ಜಗ ಮುತ್ತಿಮೋಹಿಪುದೆಂದು ಕೇಳಿಕೇಳಿ
ಕರ್ತೃ ನೀಲ್ಗಿರಿಲಿಂಗವರ್ತಿಯಿಂದೈತಂದು ಕೇಳಿಕೇಳಿ
ಸತ್ತವನಿಗೆ ಪ್ರಾಣವಿತ್ತ ಸುದ್ದಿಯನಿಂದು ಕೇಳಿಕೇಳಿ

ಅಲ್ಲಮಪ್ರಭುವಿನ 'ಸಂಸಾರವೆಂಬ ಹೆಣನ ತಿನಬಂದ ನಾಯಿ ಗಳ ಜಗಳವ ನೋಡಾ' ಎನ್ನುವ ವಚನವನ್ನು ನೆನಪಿಗೆ ತರುವ ಈ ನುಡಿ, ಅರ್ಥ ಕಳೆದುಕೊಂಡ ಪ್ರಪಂಚವನ್ನು 'ಸತ್ತಶವ'

ಪದಪ್ರಯೋಗದಿಂದ ಸಂಕೇತಿಸುತ್ತದೆ. ಮುತ್ತಿಮೋಹಿಪುದು ಎನ್ನುವಲ್ಲಿ ಮರಪೆ. ಅಜ್ಞಾನಗಳ ಉಬ್ಬರವನ್ನು ಬಿಚ್ಚಿ ತೆರೆರಿಸ ಲಾಗಿದೆ. ಹೀಗೆ ಒಂದೊಂದೇ ಅರ್ಥಸ್ತರಗಳನ್ನು ಬಿಚ್ಚಿ ಕೊಳ್ಳುತ್ತ ಹೋಗುವ ಈ 'ಸತ್ತಶವ'ದ ಪರಿಕಲ್ಪನೆ ಗುರುಕೃಪೆ ಯಿಂದ ದೊರಕಿದ ಚಿಜ್ಜ್ಯೋತಿರೂಪದ ಲಿಂಗಗುಣಗಳ ಆವಿ ಷ್ಕಾರದಿಂದ ಮತ್ತೆ ಸತ್ತವನಿಗೆ ಪ್ರಾಣ ಬರುವ ಒಂದು ವ್ಯಾಪಕ ಪ್ರತಿಮೆಯನ್ನು ಖಚಿತಗೊಳಿಸಿ ನಿಲ್ಲಿಸುತ್ತದೆ.

ಆರುಬಣ್ಣದ ಪಕ್ಷಿ ಹಾರಿತು ಗಗನಕೆ ಕೇಳಿಕೇಳಿ
ಮೀರಿತು ನೋಡಿನ್ನು ಈರೇಳು ಭುವನಕೆ ಕೇಳಿಕೇಳಿ
ತೋರಿತು ತಲೆಯ ತನ್ನಿರವಿನ ಸುಮನಕೆ ಕೇಳಿಕೇಳಿ
ಹಾರಿತು ಶರಣರ ಹೃದಯ ಚಿದ್‌ಭವನಕೆ ಕೇಳಿಕೇಳಿ

ಬೆಡಗಿನ ಸೊಗಡು ಕಳಕಳಿಸುವ ಈ ನುಡಿ, ಅಂಗ ಲಿಂಗ ಸಂಬಂಧವಾಗಿ ಚಿಲ್ಲಿಂಗದ ಆಧಾರದಿಂದ ಲಿಂಗಾಂಗ ಸಾಮರಸ್ಯ ಹೊಂದಿ ಐಕ್ಯ ಸ್ಥಿತಿ ಪಡೆಯುವ ರೀತಿಯನ್ನು ಕ್ರಿಯಾಶೀಲವಾಗಿ ಬಣ್ಣಿಸುತ್ತದೆ.

ಹಾರುವ ಪಕ್ಷಿಯ ಈ ಪ್ರತಿಮೆ ವೀರಶೈವ ದರ್ಶನದ ಹಿರಿಮೆ ಯನ್ನು ಸಾಂಕೇತಿಕವಾಗಿ ಧ್ವನಿಸುವಲ್ಲಿ ಸಾರ್ಥಕವಾಗಿದೆ.

ಅರಿಷಡ್ವರ್ಗದ ಬಣ್ಣದ ಗರಿಗಳಿರುವ 'ಪಕ್ಷಿ' ಚಿಲ್ಲಿಂಗದ ಸಂಬಂಧ ಪಡೆಯುತ್ತದೆ. ಹದಿನಾಲ್ಕು ಲೋಕದಲ್ಲೂ ಇದು ಅಪೂರ್ವ. ಅಂಗ, ಲಿಂಗದ ಸಂಬಂಧ ಪಡೆದು ಲಿಂಗ ಗುಣ ಗಳೇ ಅಂಗಗುಣಗಳಾಗಿ, ಆರು ಬಣ್ಣ ಆರು ಸ್ಥಲದ ನಿಲವು ಧಾರಣೆ ಮಾಡುತ್ತವೆ. ಆಗ ಜೀವಿಯ ಅಥವಾ ಭಕ್ತನ ಇರವು

ಅರಳುತ್ತದೆ – ಅರಿವಿನ ಪರಿಮಳ ಸೂಸುತ್ತದೆ. ಆಗ ಶರಣನು 'ಚಿದ್‌ಭುವನಕೆ' ಐಕ್ಯ ಸ್ಥಿತಿ ಹೊಂದುತ್ತಾನೆ.

ಇದು, 'ಪರತತ್ತ್ವದಿರವಿನ ಕುರುಹ ಪೇಳಿದ ಸೊಲ್ಲು' ಎಂದು ಬಸವಲಿಂಗ ಶರಣರು ಸಾರುತ್ತಾರೆ.

ಹೀಗೆ ವೀರಶೈವ ಧರ್ಮ ಸಿದ್ಧಾಂತದ ಮುಖ್ಯತತ್ತ್ವಗಳನ್ನು ವ್ಯಕ್ತಿ ಮತ್ತು ಸಮಾಜ ಜೀವನಕ್ಕೆ ಅನ್ವಯಿಸಿ ಸಾಧನೆಯ ಪಥಕ್ಕೆ ದಾರಿದೀಪವಾದ ಬಸವಲಿಂಗ ಶರಣರು, ಇದೆಲ್ಲ ನಾನು ನುಡಿದುದಲ್ಲ, ಗಂಟೆಯೇನೋ ಇದೆ, ಆದರೆ ಅದನ್ನು ಒಬ್ಬರು ಹಿಡಿದು ಟೆಂಟೆಣಿಸಿದಾಗ ನಾದತರಂಗಗಳು ಉಂಟು. ಅಲ್ಲದೆ ಅದು ತಾನಾಗಿಯೇ ನುಡಿಯುವುದೇ ಎಂದು ಕೇಳು ತ್ತಾರೆ.

ಹಮ್ಮು ಕರಗಿ ಅರಿವು ತುಂಬಿ ಸ್ವಾನುಭಾವದ ನೆಲೆಗಟ್ಟಿ ನಿಂದ ಮೂಡಿದ ಬಸವಲಿಂಗ ಶರಣರ ನುಡಿ 'ಶಶಿಭಾನು ಜ್ಯೋತಿ ಯಿಂದೆಸೆವ ಬೆಳಗಿಂಗೆ ಮೂಲಕಳೆ'!

'ಧರೆಯೊಲಿದ ಬಡವಂಗೆ ಧರೆಯ ಮನ್ನಣೆಯುಂಟು
ಗುರುವೆ ನೀನೊಲಿದ ಶರಣಂಗೆ ಸರಿಯುಂಟೆ
ಕರುಣಿ ನೀನೆನಗೆ ಕೃಪೆಯಾಗು'

---

## ಉಪನ್ಯಾಸ ಗ್ರಂಥಮಾಲೆಯ

## ಇತ್ತೀಚಿನ ಪ್ರಕಟನೆಗಳು

---

೧. ಹಿಂದೂ ಸಮಾಜದಲ್ಲಿರುವ ಅನಿಷ್ಟ ಪದ್ಧತಿಗಳ ನಿರ್ಮೂಲನೆ —ಎಂ. ಬಿ. ಪಾಟೀಲ

೨. ಹಳ್ಳಿಗಳಲ್ಲಿ ಗೃಹ ನಿರ್ಮಾಣ —ಎಂ. ಎಸ್. ಹುಲ್ಲೊಳ್ಳಿ

೩. ಚಿದಾನಂದಾವಧೂತರು —ಆಯ್. ಆಯ್. ಕಳಕಣ್ಣವರ

೪. ಮೂಳೆ ಮುರಿದಾಗ ಮಾಡಬೇಕಾದ ಸುಲಭ ಚಿಕಿತ್ಸೆಗಳು —ಎ. ಆರ್. ರಾಮಚಂದ್ರ

೫. ಉಪ್ಪು-ಕ್ಷಾರ ಭೂಮಿ ಮತ್ತು ಅವುಗಳ ಸುಧಾರಣೆ —ವಿಜಯಕುಮಾರ ಗಿಡ್ನವರ

೬. ಪ್ಲಾಸ್ಟಿಕ್ ಸರ್ಜರಿ (ಸುರೂಪಕ ಶಸ್ತ್ರವಿಜ್ಞಾನ) —ವಾಯ್. ಎನ್. ಇರಕಲ್ಲ

೭. ಕಲಬುರಗಿ ಜಿಲ್ಲೆಯ ಶಿಲಾಶಾಸನಗಳು —ಷ್ಠಿ. ಶಿವಾನಂದ

೮. ತುಂಗಭದ್ರಾ ನೀರಾವರಿ ಬೆಳೆಗಳು —ವಿಜಯಕುಮಾರ ಗಿಡ್ನವರ

೯. ದ್ರಾವಿಡ ಜನಾಂಗ —ಸಂಗಮೇಶ ಸವದತ್ತಿಮಠ

೧೦. ವರಲಕ್ಷ್ಮಿ ಹೈಬ್ರಿಡ್ ಹತ್ತಿ —ವಿಜಯಕುಮಾರ ಗಿಡ್ನವರ

---

ಪ್ರಸಂಗವಿಸ್ತರಣ–ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩